ಮನೋಹರ ಗ್ರಂಥ ಮಾಲೆಯ ೫೭ನೆಯ ಕುಸುಮ

# ಮೋಡಗಳು

(ಏಳು ಸಣ್ಣ ಕತೆಗಳ ಸಂಗ್ರಹ)

ಬರೆದವರು:
“ ಶ್ರೀ ಸ್ವಾಮಿ ”



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಡಿಸೆಂಬರ ೧೯೪೭  ಬೆಲೆ ೧ ರೂಪಾಯಿ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ./ಟಿ.

ಶ್ರೀ. ವಿ. ಕೃ. ಗೋಕಾಕ, ಬಿ. ಎ (ಆಕ್ಸಫರ್ಡ)

ಸಂಪಾದಕ:

ಜಿ. ಬಿ. ಜೋಶಿ



ಪ್ರಕಾಶಕರು:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ಬಿನ್ನಹ

ಚಿತ್ರಭಾನು ಸಂವತ್ಸರದ ಶ್ರಾವಣಮಾಸವು ಒಂದಿತು. ಶ್ರೀಮಾನ್ ಜೋಶಿಯವರಿಂದ ಕಾಗದಗಳು, ಕತೆಗಳು ಬೇಕೆಂದು, ಧಾರಾಕಾರವಾಗಿ ಸುರಿದುವು. ಕಾರ್ತಿಕಮಾಸದಲ್ಲಿನ ನಿರ್ಮಲವಾದ ಆಕಾಶದಲ್ಲಿರುವ ಕರ್ನಾಟಕದ ಬಾಲಾರ್ಕನ ಮುಂದೆ, ನಾನು ಕಣ್ಣಾರೆ ಕಂಡ ಇಲ್ಲವೆ ಮನಸಾರೆ ಮೆಚ್ಚಿದ, ಸಪ್ತ 'ಮೋಡ'ಗಳನ್ನು ಕುಣಿಸಿ, ಒಂದ ಸಪ್ತವರ್ಣದ ಇಂದ್ರಧನುವನ್ನು ಕನ್ನಡಿಗರ ಮುಂದಿಡುವಂತೆ ಅಂದು ಅವರಿಗೆ ಅರುಹಿದೆ. ಹಾಗೆಯೇ ಮಾಡಿದ್ದೇನೆ. ಏಳು ವರ್ಷಗಳ ಹಿಂದೆ ನನ್ನ 'ಪುಷ್ಪಮಾಲೆ'ಯನ್ನು ಕನ್ನಡಿಗರ ಮುಂದೆ ಮನೋಹರ ಗ್ರಂಥಮಾಲೆಯಿಂದಿಟ್ಟ ಶ್ರೀಮಾನ್

ಜಿ. ಬಿ. ಜೋಶಿಯವರೇ ಇಂದೂ ಈ 'ಮೋಡ'ಗಳನ್ನು ಕನ್ನಡಿಗರ ಮುಂದಿಟ್ಟಿರುವರು. ಉಪಕಾರಿಗಳಾದ ಅವರಿಗೆ ನಾನು ಚಿರಋಣಿ.

ಬಾಲ್ಯದಿಂದಲೂ ನನಗೆ ಸಹಾಯಮಾಡುತ್ತಾ ನನ್ನನ್ನು ಈ ಸ್ಥಿತಿಗೆ ತಂದ ಪೂಜ್ಯರಾದ ರಾಜಸೇವಾಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಮಾತೃಶ್ರೀ ಸೌಭಾಗ್ಯವತಿ ಪಂಕಜಮ್ಮ ವೆಂಕಟೇಶ ಅಯ್ಯಂಗಾರ್ ಅವರ ಪಾದಾರವಿಂದಗಳಲ್ಲಿ ಈ 'ಮೋಡ'ಗಳನ್ನು ಅರ್ಪಿಸುವ ಭಾಗ್ಯವನ್ನು ಶ್ರೀ ಶ್ರೀನಿವಾಸನು ಅನುಗ್ರಹಿಸಿದುದಕ್ಕಾಗಿ ನಾನು ಧನ್ಯನು

'ಮೋಡ' ಗಳಲ್ಲಿನ 'ಮಾಯಾ' ಗೆ ಧರ್ಮಪದ ವ್ಯಾಖ್ಯಾನದಲ್ಲಿನ ನಾಲ್ಕು ಪ್ರಶ್ನೆಗಳು ಆಧಾರ; 'ಸತಿ'ಗೆ, ರಜಪುಟಾಣದ ಚರಿತ್ರೆಯಲ್ಲಿ ಬೂಂದಿ ಮಹಾರಾಣಿಯು ಮಾಡಿದ ಕಡೆಯ ಸತಿಯೇ ಆಧಾರ; ಉಳಿದವಕ್ಕೆ ಎಲ್ಲಾ ನನ್ನ ಕಣ್ಣು ಮನಗಳು ಆಧಾರ! 'ಪತಿಪರಾಯಣೆ'ಯು ೧೯೩೯ ರಲ್ಲಿ ಬರೆದ ಕತೆ; ಮಿಕ್ಕವೆಲ್ಲಾ ಈ ವರ್ಷ ಬರೆದುವು.

'ಮೋಡ'ಗಳಿಗೆ ಅಮೋಘವಾದ ಮುನ್ನುಡಿಯನ್ನು ಬರೆದುಕೊಟ್ಟ ಪ್ರಿನ್ಸಿಪಲ್ ವಿನಾಯಕ ಕೃಷ್ಣ ಗೋಕಾಕ ಬಿ ಎ (ಆಕ್ಸನ್) ಅವರಿಗೆ ನನ್ನ ಅನಂತ ವಂದನೆಗಳು.

ಸೊಗಸಾದ ಮನೋಹರವಾದ ಮುಖಚಿತ್ರವನ್ನು ಬರೆದುಕೊಟ್ಟ ಚಿತ್ರಶಿಲ್ಪಿ ಶ್ರೀಮಾನ್ ರಾಘವೇಂದ್ರರನ್ನೂ, ಆ ಚಿತ್ರದ ಭಾವನೆಯನ್ನು ಕೊಟ್ಟ ಕೋಲಾರದ ಹೈಸ್ಕೂಲಿನ ಚಿತ್ರಕಲಾಧ್ಯಾಪಕರಾದ ಶ್ರೀಸ್ವಾಮಿನಾಥ ಅಯ್ಯರವರನ್ನೂ ಇಲ್ಲಿ ನೆನೆಯುವುದು ನನ್ನ ಹೆಮ್ಮೆಯೂ ಕರ್ತವ್ಯವೂ ಆಗಿದೆ.

'ಪುಷ್ಪಮಾಲೆ'ಗೆ ಆದರವಿತ್ತಂತೆಯೇ ಕನ್ನಡ ಬಾಂಧವರು 'ಮೋಡಗಳ'ನ್ನೂ ಸಂತೋಷದಿಂದ ಸ್ವಾಗತಿಸುವರೆಂದು ನಂಬಿದ್ದೇನೆ

—ಶ್ರೀ ಸ್ವಾಮಿ

# ಮುನ್ನುಡಿ

‘ ಪುಷ್ಪಮಾಲೆ ’ ಎಂಬ ಕಥಾಸಂಗ್ರಹವನ್ನು ಒರೆದು ಹೆಸರು ಗೊಂಡಿದ್ದ ಗೆಳೆಯರಾದ ಶ್ರೀಸ್ವಾಮಿಯವರು ಈಗ ‘ ಮೋಡಗಳು ’ ಎಂಬ ಇನ್ನೊಂದು ಸಂಗ್ರಹವನ್ನು ಜನತೆಗರ್ಪಿಸಿದ್ದಾರೆ. ಈ ಸಂಗ್ರಹ ವನ್ನು ಓದುಗರು ‘ ಪುಷ್ಪಮಾಲೆ ’ಯನ್ನು ಯಾವ ವಿಶ್ವಾಸದಿಂದ ಕಂಡರೋ ಅದೇ ವಿಶ್ವಾಸದಿಂದ—ಅದಕ್ಕಿಂತ ಒಂದು ತೂಕ ಹೆಚ್ಚಾದ ಪ್ರೀತಿಯಿಂದ—ಕಾಣುವದರಲ್ಲಿ ಸಂಶಯವಿಲ್ಲ.

ಈ ಕತೆಗಳ ಮುಖ್ಯ ಲಕ್ಷಣವೆಂದರೆ ಅವುಗಳಲ್ಲಿಯ ವಸ್ತು ನಾವೀನ್ಯ ವೆಂದು ಹೇಳಬಹುದಾಗಿದೆ. ಅನೇಕ ಕತೆಗಾರರು ಕನ್ನಡಿಗರ ಜೀವನದ ಆಶೆ-ಆಕಾಂಕ್ಷೆಗಳನ್ನೂ ನಿಲುವು-ಗೆಲುವುಗಳನ್ನೂ ಈಗಾಗಲೆ ಬಣ್ಣಿಸಿ ಕೀರ್ತಿಯುತರಾಗಿದ್ದಾರೆ. ಆದರೆ ಈ ನಿಟ್ಟಿನಲ್ಲಿ ಅಗಿದಷ್ಟು ಆಳವಿದೆ; ನಡೆ ದಷ್ಟು ದಾರಿಯಿದೆ. ‘ ಮಾಯಾ ’ ಎಂಬ ಕತೆಯು ಶ್ರೀನಿವಾಸರ ಮಾರ್ಗ

ದಲ್ಲಿಯೇ ಇನ್ನೊಂದು ಟಿಸಿಲೊಡೆದ ದಾರಿಯಾದರೆ 'ಸತಿ' ಎಂಬುದು ಕನ್ನಡಿಗರು ಇನ್ನೂವರೆಗೂ ತೆರೆಯದಿದ್ದ ಇತಿಹಾಸದ ಬೇರೊಂದು ಪುಟವನ್ನು ತೆರೆದು ತೋರಿಸುತ್ತದೆ. 'ಬೇಟೆ' ಎಂಬ ಕತೆಯು ಪಾಳೆಯಗಾರರ ಜೀವನವು ಯಾವ ಹಾದಿಯನ್ನು ಹಿಡಿದು ಇಂದಿನ ಯುಗದಲ್ಲಿ ಚಿಗುರೊಡೆಯಬಹುದು ಇಲ್ಲವೆ ಒಡೆಯುತ್ತಿದೆಯೆಂಬುದನ್ನು ನಿದರ್ಶನಕ್ಕೆ ತಂದರೆ 'ನಂಜಮ್ಮ' ಹಾಗು 'ಗೋಧೂಳಿ ಲಗ್ನ' ಎಂಬ ಕತೆಗಳು ಹಳ್ಳಿ-ಪಟ್ಟಣಗಳಲ್ಲಿಯ ಕೆಳಗಿನ ವರ್ಗದವರ ಸಂಸ್ಕೃತಿಯ ಮೇಲ್ಮೆಯನ್ನು ಅಚ್ಚಳಿಯದೆ ರೂಪಿಸುತ್ತವೆ 'ಪತಿಪರಾಯಣೆ' ಎಂಬ ಕೃತಿಯು ಮಧ್ಯಮವರ್ಗದವರ ಜೀವನದ ಸುಖ-ದುಃಖಗಳನ್ನು ಬಿಚ್ಚಿಡುತ್ತದೆ. 'ವಿಷಮಶೀತಜ್ವರ' ಎಂಬ ಕತೆಯು ಆಸ್ಪತ್ರಿಗಳಲ್ಲಿಯ ಜೀವನವನ್ನೂ ಧರ್ಮಾಂತರದ ರೀತಿ-ನೀತಿಗಳನ್ನೂ ತೆರೆದು ತೋರಿಸುತ್ತದೆ.

ಹೆಣ್ಣಿನ ಬಾಳಿನಲ್ಲಿ ಹೆಚ್ಚಿನ ಸ್ಫೂರ್ತಿಯೊಂದನ್ನು ಶ್ರೀಸ್ವಾಮಿಯವರು ಕಂಡುಕೊಂಡಿದ್ದಾರೆ. ಕತೆಗಳುದ್ದಕ್ಕೂ ಹೆಣ್ಣಿನ ದೈವಿಕತೆಯೂ ಸಂಸ್ಕೃತಿಯೂ ಒಡಮೂಡುವ ಹಾಗೆ ಅವರು ತಮ್ಮ ಚಿತ್ರಗಳನ್ನು ಬರೆದಿದ್ದಾರೆ. ಅವರ ಸ್ತ್ರೀಪಾತ್ರಸೃಷ್ಟಿಯಲ್ಲಿ ವೈವಿಧ್ಯವೂ ನೆಲಸಿದೆ. ಅಜೀಜಾ ಬೇಗಮ್ ನಂತಹ ಬಣ್ಣದ ಚಿಟ್ಟೆಯಿಂದ ಮಾಯಾನಂತಹ ಯೋಗಿನಿಯ ವರೆಗೆ ಇಲ್ಲಿ ಅವರ ಕಲಾಜಾಲವು ಹಬ್ಬಿದೆ. ನಡುವೆ ಉಮಾದೇವಿ, ಸರೋಜ, ಈರಿ, ಕಮಲ, ಸಂಜಮ್ಮ, ಬೂಂದಿ ಮಹಾರಾಣಿ ಮೊದಲಾದ ವನಿತೆಯರು ಸುಳಿದು ಹೋಗುತ್ತಾರೆ. ಇವರ ಇಂದಿರೆಯೂ ಸಹ ಆಕರ್ಷಕಳಾದ ವ್ಯಕ್ತಿ. ಒಂದೇ ಒಂದು ಪತ್ರದ ನೆವದಿಂದ ಈ ಸಂಗ್ರಹದ ಕೊನೆಯ ಕತೆಯಲ್ಲಿ ಸುಳಿದರೂ ಕ್ರಿಶ್ಚಿಯಾನಳ ಪಾತ್ರವು ಡಾಕ್ಟರ್, ಸಿಸ್ಟರ್, ಇಲ್ಲವೆ ಮಿಸೆಸ್ ಫರ್ನಾಂಡಿಸರಿಗಿಂತ ಹೆಚ್ಚಾಗಿ ಮನಸ್ಸನ್ನು ತುಂಬುತ್ತದೆ.

ಶ್ರೀಸ್ವಾಮಿಯವರ ಕಥನಶೈಲಿಯಲ್ಲಿ ಒಂದು ಮೋಹಕತೆಯಿದೆ. ಒಮ್ಮೆ ಓದಲು ಪ್ರಾರಂಭಿಸಿದೊಡನೆ ಮನಸ್ಸನ್ನು ಸೆರೆ ಹಿಡಿಯುವ ಗುಣವು ಅವರ ಕತೆಗಳಲ್ಲಿದೆ. ಸ್ವಭಾವ ನಿರೂಪಣದ ಆಳವು ಇಲ್ಲಿ ಅಷ್ಟೊಂದಾಗಿ ಕಾಣದಿದ್ದರೂ ಅದರ ವಿಸ್ತಾರವು ಇಲ್ಲಿ ನೆಲೆಗೊಂಡಿವೆ. ಪಾತ್ರನಿರ್ಮಾಣ ಕಾರ್ಯದಲ್ಲಿ ಕೆಲವು ಕಡೆ ಅವರ ಕೈ ಸಡಲಿದಂತೆ ಕಂಡರೂ ಮಾಯಾ,

ನಂಜಮ್ಮ, ಉಮಾದೇವಿ, ಬೂಂದಿ ಮಹಾರಾಣಿ ಮೊದಲಾದ ಪಾತ್ರಗಳ ಮೋರೆಯ ಮೇಲೆ ಜೀವಕಳೆಯಿದೆ **ನಂಜಮ್ಮ, ಬೇಟೆ, ಗೋಧೂಳಿ ಲಗ್ನ ವಿಷಮಶೀತಜ್ವರ,** ಮೊದಲಾದ ಕತೆಗಳಲ್ಲಿ ಸಾಮಾಜಿಕ ಜೀವನ ಹಾಗು ನಡೆವಳಿಕೆಯ ಕೆಲವೊಂದು ಪರಿಗಳನ್ನು ಅವರು ಬಹಳ ನಯವಾಗಿ ಚಿತ್ರಿಸಿದ್ದಾರೆ. ನೂರರಲ್ಲಿ ತೊಂಬತ್ತರೊಂಬತ್ತು ಕತೆಗಾರರಂತೆ ಕತೆಗಳನ್ನು ಮುಗಿಸುವದಕ್ಕಾಗಿ ಮಗ್ಗದ ತೊಲೆ, ಸ್ಪೈಟ್ ಹುಡ್, ಉಡಿಗೆ-ತೊಡಿಗೆಯ ಅದಲು-ಬದಲು, ಹಚ್ಚಹಸ್ನ ನೀರುಳ್ಳ ಗಾಜಿನ ಪಾತ್ರೆ, ಗೆಳತಿಯಿಂದ ಬಂದ ಪತ್ರ ಮೊದಲಾದ ಸಾಧನ-ಸಾಮುಗ್ರಿಗಳನ್ನು ಶ್ರೀಸ್ವಾಮಿಯವರು ಆಗೀಗ ಬಳಸಿಕೊಂಡಿದ್ದಾರೆ. ಆದರೆ ಈ ಯಾವ ಮಾತಿನಿಂದಲೂ ತಡೆಯುಂಟಾಗದೆ ಅವರ ಕಥಾಪ್ರವಾಹವು ನಿರರ್ಗಳವಾಗಿ ಹರಿಯುತ್ತದೆ. ಕಥೆಯ ರಮ್ಯತೆಯಲ್ಲಿ ಓದುಗರು ತಲ್ಲೀನರಾಗಿ ಹೋಗುತ್ತಾರೆ. ತಾನು ಕಂಡ ಸುಖ-ದುಃಖಗಳ ದರ್ಶನದಲ್ಲಿ ತಾನೇ ತಲ್ಲೀನನಾಗಿ ಕಲೋಪಾಸಕನು ಓದುಗರನ್ನೂ ತಲ್ಲೀನಗೊಳಿಸುವ ಕೈವಾಡವೇ ಇದೆಂದು ಹೇಳಬಹುದು.

ಕತೆಗಳಲ್ಲಿ ಅಲ್ಲಲ್ಲಿ ಬರುವ ಸಂಭಾಷಣೆಗಳಾದರೂ ಈ ನಯವನ್ನು ಕಾಯ್ದುಕೊಂಡು ಬಂದಿವೆ. ಮಾಯಾದೇವಿಯ ವೇದಾಂತದಿಂದ ಈರಿಹನುಮರ ಗ್ರಾಮ್ಯಶೈಲಿಯ ವರೆಗೆ ಲೇಖಕರು ಔಚಿತ್ಯವನ್ನರಿತು ತಮ್ಮ ಕಲಾವಂತಿಕೆಯನ್ನು ಉಪಯೋಗಿಸಿದ್ದಾರೆ. ಇದೊಂದು ಈ ಕತೆಗಳಲ್ಲಿಯ ದೊಡ್ಡ ಗುಣವಾಗಿದೆ.

ಹೀಗೆ ತುಂಬ ಅಭಿನಂದನೀಯವಾದ ಕಲಾಸಿದ್ಧಿಯನ್ನು ಪಡೆದ ಶ್ರೀಸ್ವಾಮಿಯವರು ಇದಕ್ಕಿಂತ ಹೆಚ್ಚಿನ ಆಳಗಳನ್ನು ಅಳೆದು ಜನಶಂಕರಿಯ ಜೀವನದಲ್ಲಿ ಇನ್ನೂ ಸಂಕೋಚವಿಲ್ಲದೆ ಧುಮುಕಿ ದಿವ್ಯತರ ದರ್ಶನದ ಕಾಣಿಕೆಯನ್ನು ನಾಡಿಗೆ ಕೊಡುವರೆಂದು ನಾನು ನಂಬಿದ್ದೇನೆ. ತಮ್ಮ ಕಲಾಕೃತಿಗಳನ್ನು ಕುರಿತು ಈ ಕೆಲವು ಮಾತುಗಳನ್ನು ಬರೆಯಲು ನನಗೆ ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕಾಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

**ವಿಲಿಂಗ್ಡನ್ ಕಾ: ಲೇಜು, ಸಾಂಗ್ಲಿ** **ವಿ. ಕೃ. ಗೋಕಾಕ**

# ನಮ್ಮ ಮಾತು

ಮನೋಹರ ಗ್ರಂಥಮಾಲೆಯಲ್ಲಿ ಇದೇ 'ಶ್ರೀಸ್ವಾಮಿ'ಯವರ 'ಪುಷ್ಪಮಾಲೆ' ಎಂಬ ಕಥಾಸಂಗ್ರಹವೊಂದು ಈಗ ಆರು ವರ್ಷಗಳ ಹಿಂದೆ ಪ್ರಕಟವಾದದ್ದು ನಮ್ಮ ವಾಚಕರ ನೆನಪಿನಲ್ಲಿರಬಹುದು. ಈಗ ಕೊಡುತ್ತಿರುವ ಈ 'ಮೋಡ'ಗಳು ಎಂಬುದೂ ಅವರದೇ. ಇದೂ ಕಥಾಸಂಗ್ರಹವೇ. ಪ್ರಪಂಚದ ಆರು ವರ್ಷದ ಅವರ ಅನುಭವ, ಈ ಕತೆಗಳಿಗೆ ಇನ್ನೂ ಹೆಚ್ಚು ಆಳವನ್ನು ತಂದುಕೊಟ್ಟಿದೆ.

ಶ್ರೀಸ್ವಾಮಿಯವರು ತಮ್ಮ ಈ ಕತೆಗಳನ್ನು ಮನೋಹರ ಗ್ರಂಥ ಮಾಲೆಯಲ್ಲಿ ಪ್ರಕಟಿಸಲು ಅನುಮತಿ ಕೊಟ್ಟದ್ದಕ್ಕಾಗಿ ಅವರಿಗೂ, ಒಳ್ಳೆಯ ಮುನ್ನುಡಿಯನ್ನು ಬರೆದುಕೊಟ್ಟದ್ದಕ್ಕಾಗಿ ಪ್ರಿನ್ಸಿಪಾಲ್ ವಿ. ಕೆ. ಗೋಕಾಕರಿಗೂ, ಸುಂದರವಾದ ಹೊದಿಕೆ-ಚಿತ್ರ ಬರೆದುಕೊಟ್ಟದ್ದಕ್ಕಾಗಿ ಶ್ರೀಮಾನ್ ರಾಘವೇಂದ್ರರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಗ್ರಂಥಮಾಲೆಯಲ್ಲಿ ಆದರ ಗೌರವವನ್ನಿಟ್ಟುಕೊಂಡ ಮಿತ್ರರೊಬ್ಬರು ಮಾಲೆಗೆ ಆಜೀವ ಚಂದಾದಾರರಾಗಿ ೭೫ ರೂಪಾಯಿಗಳನ್ನು ಸಲ್ಲಿಸಿ ಸಹಾಯಮಾಡಿದ್ದಕ್ಕಾಗಿ, ನಾವು ಅವರಿಗೆ ಚಿರಋಣಿಗಳಾಗಿದ್ದೇವೆ.

—ಸಂಪಾದಕ

# ಅರ್ಪಣೆ

ನನ್ನನ್ನು ಬಾಲ್ಯದಿಂದಲೂ ಎಲ್ಲಾ ವಿಧದಲ್ಲಿಯೂ ಸಲಹುತ್ತಾ,
ಕನ್ನಡ ನುಡಿ ಮತ್ತು ನಾಡಸೇವೆ ಮಾಡಲನುವಾದ
ಪೂಜ್ಯರಾದ
**ರಾಜಸೇವಾಪ್ರಸಕ್ತ ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರ್**, ಎಂ. ಎ.
ಮತ್ತು
**ಮಾತೃಶ್ರೀ ಸೌಭಾಗ್ಯವತಿ ಪಂಕಜಮ್ಮ ವೆಂಕಟೇಶ ಐಯ್ಯಂಗಾರ್**
ಅವರ ದಿವ್ಯ ಚರಣಗಳಲ್ಲಿ
ಈ
**'ಮೋಡಗಳ'ನ್ನು**
**ಭಕ್ತಿಪೂರ್ವಕವಾಗಿ**
**ಅರ್ಪಿಸಿದ್ದೇನೆ**

—ಶ್ರೀಸ್ವಾಮಿ

# ವಿಷಯ ಸೂಚಿಕೆ

# ಮಾಯಾ

೧

ಇಂದು ಆಳವಿಯ ಜನದ ಸಂಭ್ರಮವೇ ಸಂಭ್ರಮ. ಬಹುಕಾಲ ದಿಂದಲೂ ಕಾಣಬೇಕೆಂದು ಕುತೂಹಲದಿಂದಿದ್ದ ಜನರಿದ್ದ ಕಡೆಗೆ ಗುರುದೇವರು ದಯಮಾಡಿಸಿರುವರು. ಪ್ರಕೃತಿಯಲ್ಲಿ ಜ್ಞಾನವನ್ನು ಪಡೆದ ಬುದ್ಧಗುರುವಿನ ಉಪದೇಶಾಮೃತವನ್ನು ಪ್ರಕೃತಿಯ ಕೃತಿಯಂತಿರುವ ಸ್ಥಳದಲ್ಲಿಯೇ ಪಾನ ಮಾಡಬೇಕೆಂದು, ಜನ ಊರ ಹೊರಗಿರುವ ಮಾವಿನ ತೋಪಿನಲ್ಲಿ ತಳಿರು ಆಲರುಗಳಿಂದ, ಮಂಟಪದಿಂದೊಡಗೂಡಿದ ಚಪ್ಪರವನ್ನು ನಿರ್ಮಿಸಿದ್ದರು. ಅಂದು ಸಂಜೆಯೇ ಗುರುದೇವರ ಉಪದೇಶ.

ಸಂಜೆಯ ಮೊದಲೇ ಮಂಟಪದ ಮುಂದಿನ ತಳಿರ ಚಪ್ಪರದ ಕೆಳಗೆ ಆಳವಿಯ ಮತ್ತು ಸುತ್ತಮುತ್ತಿನ ಊರುಗಳ ಜನರೆಲ್ಲಾ ಕಿಕ್ಕಿರಿದಿದ್ದರು. ಎಲ್ಲರೂ ತಟ್ಟೆಗಳಲ್ಲಿ ಹಣ್ಣು-ಹಂಪಲುಗಳನ್ನು ಗುರುದೇವನಿಗೆ ಭಿಕ್ಷೆಯರ್ಪಿ ಸಲು ತಂದಿದ್ದರು. ಅಂದು ಎಲ್ಲರ ಕಣ್ಣುಗಳಲ್ಲಿಯೂ ತಾವು ಕೇಳಿದ್ದ ಗುರುದೇವನನ್ನು ನೋಡುವ ಕಾತುರತೆಯು ತುಂಬಿತ್ತು. ಮಂಟಪದ ಮುಂದುಗಡೆಯಲ್ಲಿ ಹೆಂಗಸರು ಮಕ್ಕಳು ಕುಳಿತಿದ್ದರು. ಗಂಡಸರು ಕುಳಿತು ಕೊಳ್ಳಲು ಸ್ಥಳವಿಲ್ಲದೆ, ಒಮ್ಮೆ ಗುರುದೇವರ ದರ್ಶನವಾದರೆ ಕೃತಾರ್ಥರಾದೆ ವೆಂದು ನಿಂತೇ ಅವರ ಬರುವಿಕೆಯನ್ನು ಇದಿರು ನೋಡುತ್ತಿದ್ದರು.

ಸಂಜೆಯಾಯಿತು. ಬುದ್ಧಗುರುವಿನ ಪ್ರಿಯ ಶಿಷ್ಯರಾದ ಆನಂದರು ಮಂಟಪದ ಪೀಠದ ಬಳಿ ಬಂದು ನಿಂತು, ಗುರುದೇವರು ಬರುವುದನ್ನು ತಿಳುಹಿಸಿದರು. ಸಾಗರದಂತೆ ಜನಮಯವಾಗಿದ್ದ ಆ ಸ್ಥಳವು ಅಂದು ಸಾಗರ ದಂತೆಯೇ ಗಂಭೀರತೆಯಿಂದ ತುಂಬಿತ್ತು. ಎಲ್ಲೆಲ್ಲೂ ನಿಶ್ಶಬ್ದ!

ಗುರುದೇವರು ಬಂದರು. ಮಂಟಪದಲ್ಲಿ ಏರ್ಪಡಿಸಿದ್ದ ಪೀಠದಲ್ಲಿ ಕುಳಿತರು; ಮೌನದಿಂದ ಕುಳಿತರು! ಮಂಟಪದ ಮುಂದಿರುವ ಜನರ ಮೇಲೆಲ್ಲಾ ತಮ್ಮ ಸೌಮ್ಯದೃಷ್ಟಿಯನ್ನು ಬೀರಿದರು.

ಜನರೆಲ್ಲಾ ಗುರುದೇವನನ್ನು ಕಣ್ಮನಗಳು ದಣಿಯುವ ತನಕ ನೋಡಿದರು. ಬುದ್ಧದೇವನ ಕಣ್ಣುಗಳಿಂದ ಬಂದ ಸ್ವಾರ್ಥತ್ಯಾಗದ ಸೌಮ್ಯಕಿರಣಗಳು ಅನೇಕರ ನಯನಗಳ ಮೂಲಕ ಅವರ ಹೃದಯಗಳನ್ನು ಹೊಕ್ಕವು.

ಗುರುದೇವರು ತಮ್ಮ ಮುಖದಲ್ಲಿ ಮುಗುಳುನಗೆಯನ್ನು ಸೂಸಿದರು!

ಇದನ್ನು ಕಂಡ ಆನಂದರು ತಮ್ಮ ಮನಸ್ಸಿನಲ್ಲಿಯೇ, 'ಈ ಊರ ಜನ ಪುಣ್ಯವಂತರು. ಗುರುವು ಸುಪ್ರೀತರಾದರು!' ಎಂದುಕೊಳ್ಳುತ್ತಾ ದೇವನ ಕಡೆ ನೋಡಿ, ಎಂದೂ ಇಲ್ಲದ ಅವರ ವರ್ತನೆಯನ್ನು ಕಂಡು ಆಶ್ಚರ್ಯಪಟ್ಟರು.

ಜನ ಒಬ್ಬೊಬ್ಬರಾಗಿ ಬಂದು ಗುರುದೇವರಿಗೆ ಭಿಕ್ಷೆಯನ್ನರ್ಪಿಸಿ ನಮಸ್ಕರಿಸಿದರು. ಅವರು ಎಲ್ಲರನ್ನೂ ಹರಸಿದರು.

ಇದಾದ ಮೇಲೆ ಎಲ್ಲೆಲ್ಲಿಯೂ ಮೌನ. ಗುರುದೇವರ ಉಪದೇಶವನ್ನು ಕೇಳಬೇಕೆನ್ನುವ ಕುತೂಹಲವನ್ನು ಜನ ತಮ್ಮ ಮುಖದ ಮೇಲಿನ ಚರ್ಯೆಯಿಂದ ತೋರಿಸಿದರು.

ಆನಂದರು ನಮಸ್ಕರಿಸುತ್ತಾ, 'ಗುರುಗಳ ಉಪದೇಶಕ್ಕಾಗಿ ಜನ ಕಾತುರತೆಯಿಂದ ಇದ್ದಾರೆ' ಎಂದರು.

ಇವರ ಮಾತನ್ನು ಕೇಳಿ ಬುದ್ಧಗುರುವು ಮುಗುಳುನಗೆ ಸೂಸಿ, 'ಆಗಲಿ, ಆನಂದ' ಎಂದು ಎದ್ದು ನಿಂತರು. ಸುತ್ತಲೂ ನೆರೆದಿದ್ದ ಜನದ ಕಡೆ ನೋಡಿವರು; ಶಿಷ್ಯನನ್ನಾರಿಸುವ ಗುರುವಿನಂತೆ ನೋಡಿದರು.

ಬುದ್ಧಗುರುವು ಉಪದೇಶಿಸಲು ಆರಂಭಿಸಿದರು.

'ಮಾನವನ ಜೀವ ಅನಿತ್ಯ; ಸಾವು ಬರುವುದು ಖಂಡಿತ. ಮೃತ್ಯುವಿಗೆ ಬೇಕಾದುದು ನಾವು ಸಾಯಬೇಕಾದುದು. ನಮ್ಮ ಜೀವನಕ್ಕೆ ಸಾವೇ ಕೊನೆ. ಪರಿಕಿಸಿ ನೋಡಿದರೆ ಜೀವ ನಿಜವಲ್ಲ. ಸಾವು ಖಂಡಿತ. ಆದುದರಿಂದ ನೀವುಗಳೆಲ್ಲರೂ ಒಂದೇ ಮನಸ್ಸಿನಿಂದ ಮೃತ್ಯುವನ್ನು ಕುರಿತು ತಪಸ್ಸು ಮಾಡಿ. ಹಾಗೆ ಮೃತ್ಯುವನ್ನು ಕುರಿತು ತಪಸ್ಸು ಮಾಡದವರಿಗೆ ಸಾವು

ಸಮೀಪಿಸಿದಾಗ, ಅವರು ಗಾಬರಿಬಿದ್ದು ಅಳುತ್ತಾ, ತಮ್ಮ ಅಂತ್ಯವನ್ನು— ಭಯ ಮತ್ತು ಆಶ್ಚರ್ಯದಿಂದ ಹಾವನ್ನು ನೋಡುವ ಜನರಂತೆ—ನೋಡು ವರು. ಆದರೆ ಮೃತ್ಯುವನ್ನು ಕುರಿತು ತಪಸ್ಸು ಮಾಡಿದವರೆಲ್ಲಾ ಭಯ ಪಡುವುದಿಲ್ಲ. ಅವರು ತಾವು ದೂರದಿಂದ ನೋಡಿದ ಹಾವನ್ನು ಕೋಲಿನ ಕೊನೆಯಿಂದ ಎತ್ತಿ, ದೂರ ಬಿಡುವ ಮಾನವನಂತೆ ಇರುವರು ಆದುದರಿಂದ ನೀವೆಲ್ಲರೂ ಮೃತ್ಯುವನ್ನು ಕುರಿತು ಈಗಿನಿಂದ ತಪಸ್ಸು ಮಾಡಿ. '

ಉಪದೇಶವನ್ನು ಮುಗಿಸಿದೊಡನೆಯೇ ಯಾರು ತಮ್ಮ ಉಪದೇಶ ವನ್ನು ಗ್ರಹಿಸಿದರು ಎನ್ನುವುದನ್ನು ನೋಡುವ ದೃಷ್ಟಿಯನ್ನು ಶಿಷ್ಯವೃಂದದ ಮೇಲೆ ಬೀರಿದರು. ತಮ್ಮ ಉಪದೇಶಕ್ಕೆ ಅಂದು ಬೆಲೆ ದೊರೆತಿದೆ ಎಂಬು ದನ್ನರಿತ ತೃಪ್ತಿಯನ್ನು, ತಮ್ಮ ಮುಖದಲ್ಲಿ ಕಿರು-ನಗೆಯನ್ನು, ಸೂಸಿ ಪೀಠದಲ್ಲಿ ಕುಳಿತರು.

ಎಲ್ಲರೂ ಒಬ್ಬೊಬ್ಬರಾಗಿ ಗುರುದೇವರ ಆಶೀರ್ವಾದವನ್ನು ಪಡೆಯುತ್ತ ಊರಕಡೆ ತೆರಳಿದರು ಸುಮಾರು ಹದಿನಾರು ವರ್ಷದ ಹುಡುಗಿಯರಿಬ್ಬರು ಜನಸಂದಣಿ ಕಡಿಮೆಯಾದ ಮೇಲೆ ಗುರುದೇವನ ಆಶೀರ್ವಾದವನ್ನು ಪಡೆಯ ಬೇಕೆಂದು ಕಾದಿದ್ದರು.

ಅವರಲ್ಲಿ ಒಬ್ಬಳು ಮತ್ತೊಬ್ಬಳನ್ನು ಕುರಿತು, 'ಉಷಾ, ಬುದ್ಧಗುರು ಏನ ಉಪದೇಶ ಆಶ್ಚರ್ಯಕರವಾಗಿದೆ. ನಾವು ಮೃತ್ಯುವನ್ನು ಕುರಿತು ತಪಸ್ಸು ಮಾಡುವುದು ನಮ್ಮ ಕರ್ತವ್ಯ ' ಎಂದಳು.

ಅದಕ್ಕೆ ಮತ್ತೊಬ್ಬಳು ' ಮಾಯಾ, ಅದು ಬಹಳ ಕಷ್ಟವಾದ ಕೆಲಸ ' ಎಂದಳು.

ಇದನ್ನು ಕೇಳಿ ಮಾಯಾ ನಸುನಕ್ಕಳು.

ಜನಸಂದಣಿ ಕಡಿಮೆಯಾಗುತ್ತ ಬಂದಿತು. ಇಬ್ಬರೂ ಗುರುದೇವರ ಬಳಿಗೆ ಹೋಗಿ ನಮಸ್ಕರಿಸಿದರು. 'ತಪಸ್ಸಿದ್ಧಿಯಾಗಲಿ!' ಎಂದು ಮುಗುಳು ನಗೆಯಿಂದ ಗುರುವು ಅವರಿಬ್ಬರನ್ನೂ ಹರಸಿದರು.

ಆಗ ಮಾಯಾ, ' ಗುರುದೇವರ ದರ್ಶನವನ್ನು ಮುಂದೆ ಯಾವ ಊರ ಜನ ಮಾಡುವ ಭಾಗ್ಯವಿದೆಯೋ ! ' ಎಂದು ಬುದ್ಧಗುರುವನ್ನೇ ಕೇಳಿದಳು.

ಅಲ್ಲಿದ್ದವರು ಇವಳ ಧೈರ್ಯವನ್ನು ಕಂಡು ಬೆರಗಾದರು. ಗುರುವಿನ ಹತ್ತಿರದ ಶಿಷ್ಯರಿಗೇ ಹೀಗೆ ಕೇಳುವ ಧೈರ್ಯವಿರಲಿಲ್ಲ. ಅವರು ಯಾರೂ ಎಂದೂ ಹೀಗೆ ಅಂದಿನ ವರೆಗೂ ಕೇಳಿಯೂ ಇರಲಿಲ್ಲ! ಆನಂದರು ಗುರುವಿನ ಕಡೆಗೊಮ್ಮೆ ನೋಡಿ ಮಾಯಾದೇವಿಯ ಕಡೆಗೊಮ್ಮೆ ತಮ್ಮ ಆಶ್ಚರ್ಯದ ದೃಷ್ಟಿಯನ್ನು ಬೀರಿದರು.

ಗುರುವು ಸೌಮ್ಯರಾಗಿಯೇ ಮುಗುಳುನಗೆಯಿಂದ, ' ನನ್ನ ಜನ್ಮ-ಭೂಮಿ ಕಪಿಲವಸ್ತುವಿಗೆ ಇಲ್ಲಿಂದ ಹೋಗಬೇಕೆಂದಿದ್ದೇನೆ, ಮಗು ' ಎಂದರು.

' ಅದು ಪುಣ್ಯಭೂಮಿ. ತಪಸ್ವಿಗಳ ಪುಣ್ಯಾಶ್ರಮ ' ಎಂದು ಗುರು ದೇವನ ಪಾದಕ್ಕೆ ಮತ್ತೊಮ್ಮೆ ನಮಸ್ಕರಿಸಿ, ' ಪುನಃ ಗುರುದೇವರ ದರ್ಶನ ವೆಂದಾಗುವುದೋ ! ' ಎಂದು ಮಾಯಾ ಕೇಳಿದಳು.

' ಇಂದಿಗೆ ಸರಿಯಾಗಿ ಮೂರು ವರ್ಷಕ್ಕೆ ಇದೇ ಬಲಿಪಾಡ್ಯಮಿಯ ದಿನ ಬರುತ್ತೇನೆ ' ಎಂದು ಬುದ್ಧಗುರುವು ಹೇಳಿದರು.

ಅಲ್ಲಿ ನೆರೆದಿದ್ದ ಜನಕ್ಕೆ ಬುದ್ಧಗುರುವಿನ ಮಾತನ್ನೂ ಹುಡುಗಿಯ ಧೈರ್ಯವನ್ನೂ ನೋಡಿ ಆಶ್ಚರ್ಯ ಮತ್ತು ಸಂತೋಷವಾಯಿತು. ಗುರುವು ಮತ್ತೊಮ್ಮೆ ಅಲ್ಲಿಗೆ ಬರುವರೆಂಬ ಸಂತೋಷದ ಮಾತನ್ನು ಕೇಳಿ, ಅವರ ಅಪ್ಪಣೆ ಪಡೆದು ಹುಡುಗಿಯರಿಬ್ಬರೂ ಊರ ಕಡೆ ಹೊರಟರು.

೨

ಇಂದು ಬಲಿಪಾಡ್ಯಮಿ. ಮಾಯಾ ಹಬ್ಬದ ಊಟ ಮುಗಿದ ಮೇಲೆ ಮನೆಯಲ್ಲಿನ ಅಂಗಳದಲ್ಲಿ ಕುಳಿತು—ಮನಸ್ಸು ಇಹಲೋಕವನ್ನು ಮರೆತಿದ್ದರೂ—ಕೈಗಳಿಂದ ದಾರವನ್ನು ಲಾಳಕ್ಕೆ ಸುತ್ತುತ್ತಾ, ಸುತ್ತಿದ ಲಾಳಗಳನ್ನು ಹತ್ತಿರದಲ್ಲಿರುವ ಬುಟ್ಟಿಗೆ ಹಾಕುತ್ತಾ ಇದ್ದಳು. ಅವಳ ತಂದೆ ಮತ್ತು ಚಿಕ್ಕಮ್ಮ ಊರ ಹೊರಗಿರುವ ಅವರ ಮಗ್ಗದ ಮನೆಗೆ ಬಟ್ಟೆಯನ್ನು ನೇಯಲು ಹೋಗಿದ್ದರು

ಆಗ ' ಮಾಯಾ! ಮಾಯಾ!! ' ಎಂದು ಕೂಗುತ್ತಾ ಆತುರದಿಂದ ಉಷಾದೇವಿಯು ಮಾಯಾ ಕುಳಿತಿದ್ದ ಅಂಗಳಕ್ಕೆ ಬಂದಳು. ' ಜೀವ ಅನಿತ್ಯ; ಸಾವು ಖಂಡಿತ. ಮೃತ್ಯು ನೀನೇ ಸ್ಥಿರ. ನಾನು ನಿನ್ನ ದಾಸಿ—ಅಲ್ಲ ಗೆಳತಿ ' ಎಂದು, ತನ್ನಷ್ಟಕ್ಕೆ ತಾನೇ ಉಸುರಿಕೊಳ್ಳುತ್ತಾ, ಯಂತ್ರದಂತೆ, ಅರಿವಿಲ್ಲದೆ ಲಾಳಕ್ಕೆ ದಾರವನ್ನು ಸುತ್ತುತ್ತಾ, ಧ್ಯಾನಾಸಕ್ತಳಾಗಿದ್ದ ಮಾಯಾದೇವಿಯನ್ನು ಉಷಾ ಕಂಡು ನಿಂತಳು; ಅವಳ ಮನಸ್ಸ್ಥೈರ್ಯ ವನ್ನು ಕಂಡು ಬೆರಗಾಗಿ ಮೋಣದ ಗೊಂಬೆಯಂತೆ ಮೌನವಾಗಿ ನಿಂತಳು.

ಕಾಲು ಗಂಟೆಯಾಯಿತು. ಉಷಾದೇವಿಯೇ ಮೌನಮುದ್ರೆಯನ್ನು ಒಡೆದಳು. ' ಮಾಯಾ! ' ಎಂದು ಮತ್ತೊಮ್ಮೆ ಕೂಗಿದಳು.

ಮಾಯಾ ತಲೆ ಎತ್ತಿದಳು. ತನ್ನೆರಡು ವಿಶಾಲವಾದ ನಯನಗಳಿಂದ ಉಷಾದೇವಿಯನ್ನು ದೃಷ್ಟಿಸಿ ನೋಡಿದಳು. ಅವಳ ಕೈಗಳು ಮಾತ್ರ ದಾರ ವನ್ನು ಲಾಳಕ್ಕೆ ಸುತ್ತುತ್ತಿದ್ದವು. ' ಮಾಯಾ, ಗುರುದೇವರು ಬಂದಿರು ವರು! ' ಎಂದು ಉಷಾ ಹೇಳಿದಳು.

' ಆಂ! '

' ಹೌದು; ಮರತೆಯಾ ಇಂದು ಬಲಿಪಾಡ್ಯಮಿ ಎಂಬುದನ್ನು! ಅವರು ಬಂದು ಇಂದಿಗೆ ಮೂರು ವರ್ಷವಾಯಿತಲ್ಲವೇ? '

' ಬಲಿಪಾಡ್ಯಮಿ! ನಿಜವಾಗಿಯೂ ಇಂದು ಬಲಿಪಾಡ್ಯಮಿ. ವಾಮ ನನು ತ್ರಿವಿಕ್ರಮನಾಗಿ ಬಲಿಗೆ ಕೀರ್ತಿ ಮುಕ್ತಿಗಳನ್ನಿತ್ತು, ಪೂಜೆಯಲ್ಲಿ ತನ ಗಿದ್ದ ಪ್ರಥಮಸ್ಥಾನವನ್ನು ಭಕ್ತನಿಗರ್ಪಿಸಿದ ದಿನ! ಊರ ಹೊರಗಿನ ತೋಪಿ ನಲ್ಲಿಳಿದಿದ್ದಾರೆಯೇ? '

' ಇಲ್ಲ; ಊರ ಹೊರಗಿರುವ ಆಗ್ನಾಳವ ಆಶ್ರಮದಲ್ಲಿ ಬಿಡಾರ ಮಾಡಿ ದ್ದಾರಂತೆ. '

' ಎಲ್ಲಿಂದ ಬಿಜಯ ಮಾಡಿಸಿದರು? '

' ಜೇತ ವನದಿಂದ. ಐನೂರು ಭಿಕ್ಷುಗಳೊಡನೆ ದಯಮಾಡಿಸಿರುವ ರಂತೆ. ನೀನು ಬರುವುದಿಲ್ಲವೇ ಗುರುದೇವನನ್ನು ನೋಡಲಿಕ್ಕೆ? '

' ಬಾರದೆ ಉಂಟೇ ಉಷಾ! ಪೂರ್ಣಿಮಾ ಚಂದ್ರನಂತೆ ಮುಖ ಬೆಳ ಗುತ್ತಿರುವ ನನ್ನ ತಂದೆ, ಒಡೆಯ, ಆಚಾರ್ಯ ತಾನೇ ಬಂದಿರುವಲ್ಲಿ, ನೋಡದೆ

ಇರುವೆನೇ? ಸುವರ್ಣಪುತ್ಥಳಿಯಂತೆ ಹೊಳೆಯುತ್ತಿರುವ ಗುರುದೇವನನ್ನು ಈ ಕಣ್ಣುಗಳು ಕಂಡು ಮೂರು ವರ್ಷಗಳಾದವು. ಇಂದು ಆತನ ದರ್ಶನ ವನ್ನು ಪಡೆದು, ಆತನ ಸುಧಾಮಯ ಉಪದೇಶವನ್ನು ಪಾನಮಾಡಲು ನನ್ನ ಮನಸ್ಸು ತಪತಪಿಸುತ್ತಿದೆ.'

'ಹಾಗಾದರೆ ಬಾ, ಈಗಲೇ ಹೊರಡೋಣ. ಇಂದು ಸಂಜೆ ಗುರು ದೇವರ ಉಪದೇಶವಿದೆ. ಮೊದಲೇ ಹೋದರೆ ಹತ್ತಿರದಲ್ಲಿದ್ದು ಚೆನ್ನಾಗಿ ಕೇಳಬಹುದು.'

'ಬರಬೇಕೆಂಬ ಆಸೆ ಇದೆ, ಉಷಾ! ಆದರೆ ನನ್ನ ಸ್ಥಿತಿ ಎಲ್ಲಾ ನಿನಗೆ ತಿಳಿದೇ ಇದೆ. ನನ್ನ ತಾಯಿ ಇದ್ದಿದ್ದರೆ ಖಂಡಿತ ಈಗಲೇ ಬರುತ್ತಿದ್ದೆ. ಆ ಪುಣ್ಯ ಎಲ್ಲಿ ನನಗೆ! ನಾನು ನನ್ನ ಚಿಕ್ಕಮ್ಮನಿಗೆ ಎಷ್ಟಾದರೂ ಸವತಿಯ ಮಗಳು! ಸಾಲದುದಕ್ಕೆ ಮನೆಗೆ ಬಂದು ಐದು ವರ್ಷವಾದಾಗ್ಯೂ ತನಗೆ ಮಕ್ಕಳಾಗಲಿಲ್ಲವಲ್ಲಾ ಎಂಬ ಕ್ರೋಧ ಬೇರೆ. ಯಾವ ನೆವದಿಂದಲಾದರೂ ಚಾಡಿ ಹೇಳಿ, ತಂದೆಯಿಂದ ನನ್ನನ್ನು ಹೊಡೆಸುವಳು. ಆತ ಒಳ್ಳೆಯವ. ಆದರೆ ಕ್ಷಣಕೋಪಿ ತನ್ನ ಮಾತಿಗೆ ಆತ ಲಕ್ಷ್ಯ ಕೊಡದಿದ್ದರೆ, ಆಕೆ ಹೊತ್ತು ನೋಡಿ, ಆತನಿಗೆ ಅರ್ಧ ಹೊಟ್ಟೆಗೆ ಹೆಂಡ ಕುಡಿಸಿ, ಅಮಲೇರಿಸಿ, ತನ್ನ ಮಾತಿನ ಮಳೆಯನ್ನು ಸುರಿಸಿ, ನನ್ನ ಕಷ್ಟದಿಂದ ಆಕೆ ಸುಖಪಟ್ಟಂತೆ ತೋರುವಳು. ಆತ ಪೂರ್ತಿಯಾಗಿ ಸುರಾಪಾನ ಮಾಡಿದ ದಿನ ಇಂದ್ರನಂತೆ ಪೂಜ್ಯನಾಗಿ ಮೌನವ್ರತವನ್ನಾಚರಿಸುವನು.'

'ಏನಾದರೂ ಈ ದಿನ ಕೆಲಸ ಹೇಳಿದ್ದಾನೆಯಾ?'

'ಊಂ. ಈ ಲಾಳಗಳಿಗೆಲ್ಲಾ ದಾರ ತುಂಬಬೇಕಂತೆ. ನಾಳೆ ಬೆಳಗ್ಗೆ, ದೀವಳಿಗೆಗೆ ಬಂದಿದ್ದ ಸಾಹುಕಾರ ಚನ್ನಯ್ಯನವರ ಅಳಿಯ ಊರಿಗೆ ಹೊರಡು ವನಂತೆ. ಅಷ್ಟರೊಳಗಾಗಿ ಜತೆ ಜರಿಯಂಚಿನ ಪಂಚೆ ಸಿದ್ಧವಾಗಿರಬೇಕಂತೆ. ಕತ್ತಲಾಗುವ ಮೊದಲು ದಾರ ತುಂಬಿದ ಲಾಳಗಳನ್ನು ತಂದುಕೊಡ ಬೇಕೆಂದು ತಂದೆ ಹೇಳಿದರು. ಅಷ್ಟರ ವೇಳೆಗೆ ಅವರಲ್ಲಿರುವ ಲಾಳಗಳಲ್ಲಿರುವ ದಾರವೆಲ್ಲಾ ಮುಗಿಯುತ್ತೆ. ರಾತ್ರಿಯೆಲ್ಲಾ ಅವರು ನೇಯ್ದರೇನೆ ಅವು ಬೆಳಗ್ಗೆಗೆ ಸಿದ್ಧವಾಗುವುವು. ರಾತ್ರಿ ನಮ್ಮ ತಂದೆ ಊಟ ಮಾಡಿ ಮಗ್ಗದ ಮನೆಗೆ ಬರುವ ವೇಳೆಗೆ ಈ ಬುಟ್ಟಿಯನ್ನಲ್ಲಿ ಕೊಟ್ಟು ಊಟಕ್ಕೆ ಮನೆಗೆ ಬರ

ಬೇಕಂತೆ. ಇಲ್ಲವಾದರೆ ನಿನಗೆ ತಿಳಿದೇ ಇದೆ. ಆತನಿಗೆ ಹುಚ್ಚು ಬಂದುಬಿಡುತ್ತದೆ. ಹೊಡೆದರೆ ನನಗೆ ದುಃಖವಿಲ್ಲ. ಶಾಂತಿಯಿಲ್ಲದ ಜೀವನದಿಂದಿರುವುದು ಕಷ್ಟ.'

'ಹಾಗಾದರೆ ಈ ಎಲ್ಲಾ ಲಾಳಗಳಿಗೂ ದಾರ ತುಂಬಿ, ಮಗ್ಗದ ಮನೆಗೆ ಹೋಗಿ, ಪುನಃ ಈ ಕಡೆ ಬಂದು ಆಶ್ರಮಕ್ಕೆ ಹೋಗಬೇಕಾ?'

'ಅದು ಬೇಡ. ಲಾಳಗಳನ್ನು ದಾರದಲ್ಲಿ ತುಂಬಿ ಈ ಬುಟ್ಟಿಯಲ್ಲಿ ಇಟ್ಟುಕೊಂಡೇ ಬರುತ್ತೇನೆ. ಬರುವಲ್ಲಿ ಮಗ್ಗದ ಮನೆ ಮಾರ್ಗವಾಗಿ ಬರೋಣ. ಊಟ ಮಾಡಲು ನನಗೆ ಹೊತ್ತಾದರೂ ಪರವಾ ಇಲ್ಲ.'

'ಆಗಲಿ. ಹಾಗಾದರೆ ಬೇಗಬೇಗ ಲಾಳಗಳಿಗೆ ದಾರ ತುಂಬು. ನಾನು ಹೋಗಿ, ಗುರುದೇವರ ಭಿಕ್ಷೆಗಾಗಿ, ಹಣ್ಣು-ಹಂಪಲು ಮತ್ತು ಹೂವಿನ ಹಾರವನ್ನು ತರುತ್ತೇನೆ.'

'ಹಾಗೆಯೇ ನಮ್ಮ ಹಿತ್ತಲಿನ ತೋಟದಲ್ಲಿರುವ ಗಿಡಗಳಲ್ಲಿ ಮಾಗಿರುವ ಹಣ್ಣನ್ನು ಕೊಯ್ದು, ಬಳ್ಳಿಯಲ್ಲಿರುವ ಮಲ್ಲಿಗೆಯನ್ನೆಲ್ಲಾ ಕಿತ್ತು ಹಾರ ಕಟ್ಟಿ, ನನಗಾಗಿ ಸಿದ್ಧಪಡಿಸಿಡು. ಆ ವೇಳೆಗೆ ಈ ಎಲ್ಲಾ ಲಾಳಗಳಿಗೂ ದಾರ ತುಂಬುತ್ತೇನೆ.'

'ಹಾಗೆಯೇ ಮಾಡು.' ಎಂದು ಹೇಳಿ ಉಷಾ ಹೊರಟುಹೋದಳು.

## ೩

ಸಂಜೆಯಾಗುತ್ತಾ ಬಂದಿತು. ಉಷಾ ಎರಡು ತಟ್ಟೆಗಳಲ್ಲಿ ಹಣ್ಣು-ಹಂಪಲು ಹಾರಗಳನ್ನು ತಂದು ಮಾಯಾದೇವಿಯ ಮುಂದಿಟ್ಟಳು. ಆಕೆಯೂ ಅಷ್ಟುಹೊತ್ತಿಗೆ ಲಾಳಗಳಿಗೆಲ್ಲಾ ದಾರ ತುಂಬಿ, ಅವುಗಳನ್ನು ಬುಟ್ಟಿಯಲ್ಲಿ ಹಾಕಿ ಹೊರಡಲು ಸಿದ್ಧಳಾದಳು.

ಉಷಾ ಎರಡು ತಟ್ಟೆಗಳನ್ನೂ, ಮಾಯಾ ಬುಟ್ಟಿಯನ್ನೂ ಹೊತ್ತು ಅಗ್ಗಾಳವದ ಆಶ್ರಮದ ಕಡೆ ಬೇಗಬೇಗ ಹೆಜ್ಜೆಯಿಡುತ್ತಾ ಹೊರಟರು.

ಆಶ್ರಮದ ಉಪದೇಶ-ಮಂದಿರಕ್ಕೆ ಇಬ್ಬರೂ ಬಂದರು. ಮಂದಿರವೆಲ್ಲಾ

ಜನರಿಂದ ಕಿಕ್ಕಿರಿದುಹೋಗಿತ್ತು. ಗುರುದೇವರು ಪೀಠದಲ್ಲಿ ಮೌನವಾಗಿ ಕುಳಿತಿದ್ದರು. ಭಿಕ್ಷೆಯನ್ನೆಲ್ಲಾ ಸ್ವೀಕರಿಸಿದರು. ಆನಂದರು ಒಮ್ಮೆ 'ಜನ ಗುರುದೇವರ ಉಪದೇಶಕ್ಕಾಗಿ ಕಾದಿದ್ದಾರೆ' ಎಂದದ್ದೂ ಆಗಿತ್ತು. ಗುರು ದೇವರು ಮೌನದಿಂದಿದ್ದರು! ಮರುಮಾತನಾಡಲು ಧೈರ್ಯ ಯಾರಿಗೂ ಇರಲಿಲ್ಲ. ಗುರುದೇವರು ಮೌನವಾಗಿದ್ದಾಗ ಆ ಮೌನಮುದ್ರೆಯನ್ನೊಡೆ ಯಲು ಮಾನವರಿಗಾಗಲಿ, ದೇವತೆಗಳಿಗಾಗಲಿ ಧೈರ್ಯವೆಲ್ಲಿಯದು? ಇಬ್ಬರು ಹುಡುಗಿಯರು ಬರುವ ಹೊತ್ತಿಗೆ ಅರ್ಧಗಂಟೆಯ ಮೌನವನ್ನು ಎಲ್ಲರೂ ತಾಳಿದ್ದರು. ಎಲ್ಲೆಲ್ಲೂ ನಿಶ್ಶಬ್ದ. ತಲೆ ತಗ್ಗಿಸಿ ಧ್ಯಾನದಲ್ಲಿದ್ದ ಗುರುದೇವರನ್ನೇ ದೃಷ್ಟಿಸಿ ನೋಡುತ್ತಾ, ಜನರೆಲ್ಲಾ 'ಈ ದಿನ ಗುರುದೇವರು ಧ್ಯಾನಸಮಾಧಿ ಯಲ್ಲಿದ್ದಾರೆ!' ಎಂದು ಆಶ್ಚರ್ಯದಿಂದಿದ್ದರು.

ಮಾಯಾ ಮತ್ತು ಉಷಾ ಗುರುದೇವರ ಮುಂದೆ ಒಂದು, ಭಿಕ್ಷೆ ಯನ್ನು ಇಟ್ಟು, ಪುಷ್ಪಮಾಲಿಕೆಯನ್ನರ್ಪಿಸಿದರು. ಗುರುದೇವರು ತಲೆಯೆತ್ತಿ ಅವರನ್ನು ಹರಸಿ, 'ಮಗೂ, ಎಲ್ಲಿಂದ ಬಂದೆಯಮ್ಮ?' ಎಂದು ಮಾಯಾ ದೇವಿಯನ್ನು ಕೇಳಿದರು.

'ಗುರುದೇವ, ನಾನು ಎಲ್ಲಿಂದ ಬಂದೆನೆಂಬುದು ನನಗೆ ತಿಳಿಯದು.' ಎಂದು ಮಾಯಾ ಉತ್ತರವಿತ್ತಳು.

'ಎಲ್ಲಿಗೆ ಹೋಗುತ್ತೀ, ಮಗು?'

'ನನಗೆ ಗೊತ್ತಿಲ್ಲ, ಗುರುದೇವ!'

'ಗೊತ್ತಿಲ್ಲವೇ?'

'ಗೊತ್ತಿದೆ, ಗುರುದೇವ!'

'ಗೊತ್ತಿದೆಯೇ?'

'ಗೊತ್ತಿಲ್ಲ, ಗುರುದೇವ!' ಎಂದು ಮಾಯಾ ನಮ್ರಳಾಗಿ ಉತ್ತರ-ವಿತ್ತು, ಗುರುದೇವನ ವದನಾರವಿಂದವನ್ನು ನೋಡುತ್ತಾ ಸಾಕ್ಷಾತ್ಕಾರ ಪಡೆದ ಯೋಗಿಯಂತೆ ನಿಂತಳು.

ಸಭಾಂಗಣದಲ್ಲಿ ನೆರೆದಿದ್ದ ಜನ ಗೊಣಗಲು ಪ್ರಾರಂಭಿಸಿದರು. ಮಾಯಾದೇವಿಯ ಉತ್ತರಗಳನ್ನು ಕೇಳಿ, 'ಇವಳಿಗೆಷ್ಟು ಅಹಂಕಾರ! ಸರ್ವ

ಜ್ಞಾನಿಯಾದ ಗುರುದೇವನೊಡನೆ ಇದೇನು ಇವಳ ಹುಡುಗಾಟ!' ಎಂದರು ಕೆಲವರು. "ಗುರುದೇವರು 'ಎಲ್ಲಿಂದ ಬಂದೆಯಮ್ಮ?' ಎಂದಿದ್ದಕ್ಕೆ ಇವಳೇಕೆ 'ಆಳವಿಯಲ್ಲಿರುವ ಮನೆಯಿಂದ ಬಂದೆ' ಎಂದು ಹೇಳಬಾರದಾಗಿತ್ತು?" ಎಂದರು ಮತ್ತೆ ಕೆಲವರು. ಹೀಗೆ ಜನ ತಮಗೆ ಮನಬಂದಂತೆ ಮಾತನಾಡಲು ಪ್ರಾರಂಭಿಸಿದರು. ಪಿಸಪಿಸ ಮಾತುಗಳಿಂದ ಸಭಾಮಂದಿರವೆಲ್ಲಾ ತುಂಬಿಹೋಗಿತ್ತು.

ಬುದ್ಧಗುರುವು, ಧ್ಯಾನಾಸಕ್ತಳಾಗಿ, ಭಕ್ತೆಯಾಗಿ ನಿಂತಿದ್ದ ಮಾಯಾದೇವಿಯ ಕಡೆಗೊಮ್ಮೆ ನೋಡಿ, ಮುಂದಿದ್ದ ಜನರ ಕಡೆಗೊಮ್ಮೆ ನೋಡಿ, ಪಕ್ಕದಲ್ಲಿ ನಿಂತಿದ್ದ ಆನಂದರಿಗೆ, 'ಈಕೆಯನ್ನು ಪುನಃ ಪ್ರಶ್ನಿಸಿ, ಜನಕ್ಕೆ ಉತ್ತರವನ್ನು ವಿಶದಗೊಳಿಸು' ಎನ್ನುವ ಇಂಗಿತವನ್ನು ಸೂಸುವ ದೃಷ್ಟಿಯನ್ನು ಬೀರಿದರು.

ಆನಂದರು ಕೈಯನ್ನು ಮುಂದೆ ನೀಡಿ, ಜನಕ್ಕೆ 'ಸುಮ್ಮನಿರಿ' ಎಂದು ಎಚ್ಚರಿಸಿದರು. ಪುನಃ ಮಂದಿರವೆಲ್ಲಾ ನಿಶ್ಶಬ್ದವಾಯಿತು.

"ದೇವಿ! ಗುರುದೇವರು 'ಮಗು, ಎಲ್ಲಿಂದ ಬಂದೆಯಮ್ಮ?' ಎಂದು ಕೇಳಿದ್ದಕ್ಕೆ 'ಗುರುದೇವ, ನಾನು ಎಲ್ಲಿಂದ ಬಂದೆನೆಂಬುದು ನನಗೆ ತಿಳಿಯದು' ಎಂದು ಏತಕ್ಕೆ ಹೇಳಿದೆಯಮ್ಮ?" ಎಂದು ಆನಂದರು ಮಾಯಾದೇವಿಯನ್ನು ಕೇಳಿದರು.

"ಗುರುವೇ! ನಾನು ನನ್ನ ಮನೆಯಿಂದ ಯಾವಾಗ ಬಂದೆನೆಂಬುದು ಎಲ್ಲರಿಗೂ ತಿಳಿದಿದೆ. ಆದರೆ ಗುರುದೇವರು ಕೇಳಿದ ಪ್ರಶ್ನೆಗೆ ನಾನು 'ಎಲ್ಲಿಂದ ಬಂದು ಇಲ್ಲಿ ಹುಟ್ಟಿದೆ?' ಎಂದು ತಿಳಿದುಕೊಂಡೆ. ನಾನು ಎಲ್ಲಿಂದ ಬಂದು ಇಲ್ಲಿ ಹುಟ್ಟಿದೆನೆಂಬುದು ನನಗೆ ತಿಳಿಯದು."

'ಸರಿಯಾದ ಉತ್ತರವನ್ನು ಹೇಳಿದೆ, ಮಗು!' ಎಂದು ಬುದ್ಧಗುರುವು ಹೇಳಿದರು. ಜನರೆಲ್ಲಾ ವಿಸ್ಮಯದಿಂದ ಗುರುದೇವರ ಮತ್ತು ಮಾಯಾದೇವಿಯ ಕಡೆ ನೋಡುತ್ತಿದ್ದರು.

ಆನಂದರು "ದೇವಿ! 'ನೀನು ಎಲ್ಲಿಗೆ ಹೋಗುತ್ತೀ?' ಎಂದು ಕೇಳಿದುದಕ್ಕೆ 'ನನಗೆ ಗೊತ್ತಿಲ್ಲ, ಗುರುದೇವ' ಎಂದು ಏತಕ್ಕೆ ಹೇಳಿದೆ?" ಎಂದು ಕೇಳಿದರು.

" ಗುರುವೇ ! ಈ ಬುಟ್ಟಿಯಲ್ಲಿರುವ ಲಾಳಗಳನ್ನು ನೋಡಿದರೆ, ನಾನು ಸೇಯುವ ಮನೆಗೆ ಹೋಗುತ್ತೇನೆ ಎಂಬುದು ತಿಳಿದುಬರುತ್ತದೆ. ಆದರೆ ಗುರುದೇವರ ಪ್ರಶ್ನೆ ' ನೀನು ಎಲ್ಲಿಗೆ ಹೋಗಿ ಪುನರ್ಜನನವನ್ನು ಹೊಂದುತ್ತೀ ? ' ಎಂದು ಅರಿತೆ. ಈ ಜನ್ಮ ಕಳೆದ ಮೇಲೆ ಎಲ್ಲಿ ಪುನರ್ಜನನ ಹೊಂದುತ್ತೇನೆಯೋ ಗೊತ್ತಿಲ್ಲ. "

' ನನ್ನ ಪ್ರಶ್ನೆಯನ್ನು ಚೆನ್ನಾಗಿ ಅರಿತೆ, ಮಗು ! ' ಎಂದು ಬುದ್ಧ ಗುರುವು ಮಾಯಾದೇವಿಯನ್ನು ಕೊಂಡಾಡಿದರು.

ಉಷಾ ಮಾಯಾದೇವಿಯ ಕಡೆ ನೋಡುತ್ತಾ ತನಗರಿಯದ ತನ್ನ ಗೆಳತಿಯ ಬುದ್ಧಿಜ್ಞಾನವನ್ನು ನೋಡಿ ಬೆಪ್ಪಾದಳು.

ಆನಂದರು ಮುಂದುವರಿಸಿದರು. " ದೇವಿ ! ' ನಿನಗೆ ಗೊತ್ತಿಲ್ಲವೇ ? ' ಎಂದು ಗುರುದೇವರು ಕೇಳಿದುದಕ್ಕೆ ' ಗೊತ್ತಿದೆ ' ಎಂದು ಏಕೆ ಹೇಳಿದೆ ? " ಎಂದು ಕೇಳಿದರು.

' ಗುರುವೇ ! ನಾನು ಸಾಯಲೇಬೆಕೆಂಬುದು ನನಗೆ ಗೊತ್ತು. ಆದುದರಿಂದ ಹಾಗೆ ಉತ್ತರ ಕೊಟ್ಟೆ. '

" ದೇವಿ ! "ಗೊತ್ತಿದೆಯೇ ? ' ಎಂದು ಗುರುದೇವರು ಕೇಳಿದುದಕ್ಕೆ 'ನನಗೆ ಗೊತ್ತಿಲ್ಲ, ಗುರುದೇವ ! ' ಎಂದೇಕೆ ಹೇಳಿದೆ ? "

' ಗುರುವೇ ! ನಾನು ಸಾಯಬೇಕೆಂಬುದು ನನಗೆ ಗೊತ್ತಿದೆ. ಆದರೆ ಸಾಯುವ ಸರಿಯಾದ ವೇಳೆ ನನಗೆ ತಿಳಿಯದು. ಎಲ್ಲಿ ಸಾಯುವೆನು; ರಾತ್ರಿಯಲ್ಲಿಯೇ ಹಗಲಿನಲ್ಲಿಯೇ, ಸೂರ್ಯದೇವನು ನೆತ್ತಿಯ ಮೇಲಿದ್ದಾಗಲೇ ಅಥವಾ ಇಂಥ ಇಂಥ ವೇಳೆಯಲ್ಲಿಯೇ, ಎನ್ನುವುದು ನನಗೆ ತಿಳಿಯದು. '

ಆನಂದರು ಬುದ್ಧಗುರುವಿನ ಕಡೆ ' ಮುಂದೇನು ? ' ಎಂದು ಪ್ರಶ್ನಿಸುವ ದೃಷ್ಟಿಯನ್ನು ಬೀರಿದರು.

ಬುದ್ಧಗುರುವು ಪೀಠದಿಂದ ಎದ್ದು ನಿಂತರು. ಅವರ ಉಪದೇಶಗಳನ್ನು ಕೇಳಲು ಎಲ್ಲರೂ ಕುತೂಹಲದಿಂದ ಸಿದ್ಧರಾದರು. ಗುರುದೇವರು ಜನರನ್ನು ಕುರಿತು ' ನಿಮ್ಮಲ್ಲಿ ಅನೇಕರಿಗೆ ಈಕೆ ಏಕೆ ಹಾಗೆ ಉತ್ತರ ಕೊಟ್ಟಳೆನ್ನುವುದು ತಿಳಿದಿರಲಿಲ್ಲ. ಆದುದರಿಂದ ನೀವೆಲ್ಲರೂ ಈಕೆಯ ಮೇಲೆ ಕೋಪದ

ಕಿಡಿಗಳನ್ನು ಸುರಿಸಿದಿರಿ. ಜ್ಞಾನಚಕ್ಷುವನ್ನು ಪಡೆಯದವರು ನಿಜ ವಾಗಿಯೂ ಕುರುಡರೇ! ಆದರೆ ಅವನ್ನುಳ್ಳವರು ನಿಜವಾಗಿಯೂ ದೈವ ಸಾನ್ನಿಧ್ಯದಲ್ಲಿ ಕಣ್ಣುಳ್ಳವರು ' ಎಂದು ಹೇಳಿ,

**' ಜಗವು ಬಲು ಕುರುಡು,**
**ಅದನರಿತಿರುವರು ತುಸ ಜನರು ||ಪಲ್ಲ||**
**ಬೇಡನ ಬಲೆಯಲಿ ಬಿಡುಗಡೆ ಹೊಂದಿ,**
**ಹಾರುತ ನಲಿಯುತ ಹಕ್ಕಿಯು ತೆರನಾ,**
**ಜನ ನೋಡುವರು ಸಗ್ಗದ ಪಥವನು,**
**ಸೇರುವರವರು ಸಗ್ಗವನು || ೧ ||**

ಎಂದು ಹಾಡಿ, ' ಇಂದಿನ ಪ್ರಶ್ನೆಗಳೇ ನನ್ನ ಉಪದೇಶ. ಅವನ್ನು ಅಭ್ಯಾಸಿಸಿ' ಎಂದು ಪೀಠದಲ್ಲಿ ಕುಳಿತರು.

ಮಾಯಾದೇವಿಯ ಕಡೆ ತಿರುಗಿ ನೋಡಿ, ನಗುಮುಖದಿಂದ, ' ನಿನ್ನ ಹೆಸರೇನಮ್ಮ ? ' ಎಂದು ಕೇಳಿದರು.

' ಗುರುದೇವ! ತಾಯಿಯಿಟ್ಟ ನಲ್ಮೆಯ ಹೆಸರು ಮಾಯಾ. ಈಕೆ ನನ್ನ ಸಖಿ ಉಷಾ. '

' ಮಾಯಾ! ' ಎಂದು ಕೇಳಿ ಗುರುದೇವರು ದಿಕ್‌ಭ್ರಾಂತರಾದರು. ಅವರ ಮುಖದ ಮೇಲಿದ್ದ ನಗು ಮಾಯವಾಯಿತು. ಕಣ್ಣಿನಲ್ಲಿ ನೀರೂರಿತು. ಆನಂದರು ತಮ್ಮ ಜೀವಿತದಲ್ಲಿ ಮೊದಲ ಮತ್ತು ಕೊನೆಯ ಸಲ ಗುರು ದೇವರ ಕಣ್ಣಿನಲ್ಲಿ ನೀರು ತುಂಬಿದುದನ್ನು ಕಂಡರು. ಸರ್ವತ್ಯಾಗಿಗೆ ಕೂಡ ತಾಯಿಯ ಕರುಳ ಕರೆ ಕೇಳಿಸುತ್ತಿತ್ತು ! ಸ್ವಲ್ಪ ಹೊತ್ತಾದ ಮೇಲೆ ಗುರು ದೇವರೇ ಹೇಳಿದರು. ' ತಾಯಿ! ಬುದ್ಧಿಯಲ್ಲಿ ನೀನು ಗತಿಸಿದ ನನ್ನ ತಾಯಿ ಯಂತಿದ್ದೀ. ಹೋಗುವ ಮೊದಲು ಧ್ಯಾನಮಂದಿರದಲ್ಲಿ ಪ್ರಸಾದವನ್ನು ತೆಗೆದುಕೊಂಡು ಹೋಗು, ಮಗು ! ' ಎಂದು ನುಡಿದರು.

ಸಭಾಮಂದಿರವನ್ನು ಬಿಟ್ಟು ಬುದ್ಧಗುರುವು ಧ್ಯಾನಮಂದಿರಕ್ಕೆ ಹೋದರು. ಸಭಾಮಂದಿರದಲ್ಲಿ ನೆರೆದಿದ್ದ ಜನರೆಲ್ಲಾ ಒಬ್ಬರೊಬ್ಬರಾಗಿ ತಮ್ಮ ತಮ್ಮ ಮನೆಗಳ ಕಡೆ ಹೊರಟರು.

ಮಾಯಾ ಉಷಾ ಇಬ್ಬರೂ ಧ್ಯಾನಮಂದಿರದ ಮುಂದಿನ ಅಂಗಳದಲ್ಲಿ

ನಿಂತರು. ಧ್ಯಾನಾಸಕ್ತರಾಗಿದ್ದ ಬುದ್ಧದೇವರು ಧ್ಯಾನಮಂದಿರದಿಂದ ಹೊರಗೆ ಬರಲು ಬಹುಕಾಲವಾಯಿತು.

' ಮಾಯಾ, ಕತ್ತಲಾಗುವ ಮೊದಲೇ ನಿಮ್ಮ ತಂದೆ ಬರಹೇಳಿದ್ದರು ಎಂದಿದ್ದೆ ! ' ಎಂದು ಉಷಾ ಹೇಳಿದಳು.

' ಹೌದು. ಏನು ಮಾಡಲಿ ? ಗುರುದೇವರು ನನ್ನನ್ನು ಇಷ್ಟೆಲ್ಲಾ ಪ್ರಶ್ನಿಸುತ್ತಾರೆಂದೂ, ಇಷ್ಟು ಕಾಲವಾಗುವುದೆಂದೂ ತಿಳಿದಿರಲಿಲ್ಲ. ಈಗ ಗುರುದೇವರಿಂದ ಪ್ರಸಾದವನ್ನು ತೆಗೆದುಕೊಳ್ಳದೆ ಹೇಗೆ ಹೋಗುವುದು ? ಎಲ್ಲಾ ದೈವೇಚ್ಛೆಯಂತೆ ಆಗುವುದು. '

' ದಾರಿಯೆಲ್ಲಾ ಕಗ್ಗತ್ತಲೆ. ಊರಿನಲ್ಲಿ ಎಲ್ಲರೂ ಮಲಗಿರುವ ಹೊತ್ತು. ಬೆಳಕಿನೊಡನೆ ಯಾರನ್ನಾದರೂ ಕಳುಹಿಸಿಕೊಡಬೇಕೆಂದು ಕೇಳಬೇಕೆಂದಿದ್ದೇನೆ '

ಮಾಯಾ ಉಷೆಯ ಮಾತನ್ನು ಕೇಳಿ ನಸುನಕ್ಕಳು.

ಬುದ್ಧಗುರುವು ಆನಂದರೊಡನೆ ಧ್ಯಾನಮಂದಿರದಿಂದ ಹೊರಗೆ ಬಂದು ಇಬ್ಬರಿಗೂ ಪ್ರಸಾದವಿತ್ತರು. ಇಬ್ಬರೂ ಅವರಿಗೆ ನಮಸ್ಕರಿಸಿದರು.

' ಪುನಃ ಗುರುದೇವರ ದರ್ಶನಲಾಭ ಎಂದಾಗುವುದೋ ! ' ಎಂದು ಮಾಯಾ ಕೇಳಿದಳು.

ಗುರುದೇವರು ಉತ್ತರ ಕೊಡದೆ ಸುಮ್ಮನಿದ್ದರು.

' ಆದಷ್ಟು ಬೇಗ ದರ್ಶನವನ್ನು ತೆಗೆದುಕೊಳ್ಳುತ್ತೇನೆ. ' ಎಂದು ಉಷಾ ಬುದ್ಧಗುರುವಿಗೆ ಹೇಳಿದಳು.

' ಕತ್ತಲು ಗಾಢವಾಗುತ್ತ ಬಂದಿದೆ. ಇನ್ನು ಉಷಾ ಬೆಳಗಲೇಬೇಕು ' ಎಂದು ಗುರುದೇವ ಉಷಾದೇವಿಯನ್ನು ಹರಸಿ, ' ಕೀರ್ತಿಶಾಲಿಯಾಗು ತಾಯಿ ' ಎಂದು ಮಾಯಾದೇವಿಯನ್ನು ಹರಸಿದರು.

ಆನಂದರು ಕಳುಹಿಸಿಕೊಟ್ಟ ಬೆಳಕಿನೊಡನೆ ಹೊರಡಲು ಸಿದ್ಧನಾಗಿದ್ದ ಭಿಕ್ಷುವಿನೊಡನೆ ಇಬ್ಬರೂ ಆಳವಿಯ ಕಡೆ ಹೊರಟರು.

ನೋಯುವ ಮನೆಯ ಬಳಿ ಬರುತ್ತಲೇ ' ಉಷಾ, ಬರುತ್ತೇನೆ ' ಎಂದು ಹೇಳಿ ಮಾಯಾ ಮನೆಯನ್ನು ಹೊಕ್ಕಳು. ಉಷಾ ಭಿಕ್ಷುವಿನೊಡನೆ ತನ್ನ ಮನೆಯ ಕಡೆ ಹೊರಟಳು.

ಮಾಯಾದೇವಿಯ ತಂದೆ ಮಗ್ಗದಲ್ಲಿ ಕುಳಿತಿದ್ದನು. ಮಗ್ಗದಲ್ಲಿ ಹಾಕಿದ್ದ ಪಂಚೆಯಲ್ಲಿ ಸುಮಾರು ಕಾಲುಭಾಗ ಮಾತ್ರವಾಗಿತ್ತು. ದಾರ ತುಂಬಿದ ಲಾಳಗಳಿಲ್ಲದೆ ಅವನು ಕಾದಿದ್ದನು. ಅವನ ಪಕ್ಕದಲ್ಲಿ ಅವನ ಹೆಂಡತಿಯು ನಿಂತಿದ್ದಳು. ದೊಡ್ಡ ಉರಿಯುವ ದೀಪವೊಂದು ಮನೆಯ ಮಧ್ಯಭಾಗದ ತೊಲೆಗೆ ನೇತು ಹಾಕಲ್ಪಟ್ಟು, ಅದರ ಬೆಳಕಿನಿಂದ ಮನೆಯೆಲ್ಲಾ ಪ್ರಕಾಶಮಾನವಾಗಿತ್ತು. ಆಗ್ಗೆ ಸಾಹುಕಾರ ಚನ್ನಯ್ಯನು ಬಂದಿದ್ದು ಇನ್ನೂ ಪಂಚೆ ಪೂರ್ತಿಯಾಗಲಿಲ್ಲವಲ್ಲಾ ಎಂದು ಕೋಪಿಸಿ, ರೇಗಿ ಹೋಗಿದ್ದನು. ಮಾಯಾದೇವಿಯ ಚಿಕ್ಕಮ್ಮನು, ಆ ಹೊತ್ತಿಗೆ, ತನಗೆ ಅನುಕೂಲವಾದ ವೇಳೆ ದೊರೆತಿದ್ದುದರಿಂದ ಇದ್ದು ಇಲ್ಲದ ಚಾಡಿಯನ್ನೆಲ್ಲಾ ಹೇಳಿ, ತಾನು ಕೂಡಿಹಾಕಿದ್ದ ಅಲ್ಪ ಹಣವನ್ನು ಅವನಿಗೆ ಕುಡಿಯುವುದಕ್ಕೆ ಕೊಟ್ಟು, ಅಂದಿನ ಬೆಳಿಗ್ಗೆ ಮಾಯಾ ತನಗೆ ಹೇಳಿದ್ದ 'ನೀನು ಮನೆಯ ಮೃತ್ಯು' ಎನ್ನುವುದರ ಸೇಡನ್ನು ತೀರಿಸಿಕೊಳ್ಳಲು ಎಲ್ಲವನ್ನೂ ಅಣಿ ಮಾಡಿದ್ದಳು.

ಮಾಯಾ ಮನೆಯನ್ನು ಹೊಕ್ಕಾಗ ಎಲ್ಲಾ ನಿಶ್ಶಬ್ದವಾಗಿತ್ತು. ಹಿಂದೆಲ್ಲಾ ಮೌನವಾಗಿದ್ದ ತನ್ನ ತಂದೆಯನ್ನು ಕಂಡು ಹೆದರಿದ್ದಳು. ಮೋಡ ಕವಿದಿದ್ದಾಗ ಮಳೆ ಬರುವುದನ್ನು ಆಕೆ ಅರಿತಿದ್ದಳು. ಅವಳು ಒಂದಾಗ ಅವಳ ತಂದೆಯಾಗಲಿ ಚಿಕ್ಕಮ್ಮನಾಗಲಿ ಮಾತನಾಡಿಸಲಿಲ್ಲ. ಸ್ವಲ್ಪ ಹೊತ್ತಾದಮೇಲೆ ಅವಳ ಚಿಕ್ಕಮ್ಮ ತನ್ನ ಮುಖದಲ್ಲಿ ಮುಗುಳುನಗೆಯನ್ನು ಸೂಸಿ, ತನ್ನ ಕಣ್ಣುಗಳನ್ನು ತಿರುಗಿಸುತ್ತಾ, ಗಂಡನ ಕಡೆ ಕೊಂಕುದೃಷ್ಟಿಯನ್ನು ಬೀರಿದಳು.

ಮಾಯಾದೇವಿಯ ತಂದೆ ಮಗ್ಗದಿಂದ ಎದ್ದನು. ನೆಟ್ಟಗೆ ಮೌನವಾಗಿ ಮಾಯಾ ನಿಂತಿದ್ದ ಕಡೆಗೆ ಹೋಗಿ, 'ನಾನು ಹೇಳಿದ್ದೇನು? ಲಕ್ಷ್ಯವಿಲ್ಲವೇ ನನ್ನ ಮಾತು? ಹೋಗು. ನೀನೇ ಆ ಬಟ್ಟೆಯನ್ನು ನೇಯ್ದು ಬೆಳಗಾಗುವುದಕ್ಕೆ ಮೊದಲೇ ಸಾಹುಕಾರ ಚನ್ನಯ್ಯನಿಗೆ ಕೊಟ್ಟು ಬಾ.' ಎಂದು ರೇಗಿ, ಅವಳನ್ನು ಮಗ್ಗದ ಕಡೆ, ತನ್ನ ಕೋಪವನ್ನೆಲ್ಲಾ ಬಿಟ್ಟು, ತಳ್ಳಿದನು. ಬಿಲ್ಲಿ ಬಿಟ್ಟ ಬಾಣದಂತೆ ಆಕೆ ನೂಕಲ್ಪಟ್ಟು, ಕಾಲು ಜಾರಿ ಮಗ್ಗದ ತೊಲೆಯ ಮೇಲೆ ದೊಪ್ಪನೆ 'ಮೃತ್ಯು....ಗು..ರು..ದೇ..ವ!' ಎಂದು ಬಿದ್ದಳು.

ಆಕೆಯ ತಲೆಯು ಚಿಪ್ಪು ಒಡೆದು ರಕ್ತ ಮಗ್ಗದ ಮೇಲೆಲ್ಲಾ ಹಾರಿತು. ಬೆಳಕೊಂದು ಹಾರಿ ಆಕಾಶವನ್ನು ಸೇರಿದುದನ್ನು ಆತ ಕಂಡನು.

ನೆನೆಯದ ಈ ದೃಶ್ಯವನ್ನು ಕಂಡ ತಂದೆ ಮಗಳ ಬಳಿ ನುಗ್ಗಿ, ತೊಲೆಯ ಮೇಲಿನಿಂದ ಅವಳ ತಲೆಯನ್ನೆತ್ತಿ ತೊಡೆಯ ಮೇಲಿಟ್ಟುಕೊಂಡು, 'ನೀರು ತೆಗೆದುಕೋ' ಎಂದು ಹೆಂಡತಿಗೆ ಹೇಳಿದನು. ಆಕೆ ಸುಮ್ಮನೆ ನಿಂತಿದ್ದಳು. ಆತ ಮಗಳನ್ನು ಕ್ಷಣಕ್ಷಣಕ್ಕೂ ಮುಟ್ಟಿ ನೋಡುತ್ತಿದ್ದನು. ಕೆಲವು ನಿಮಿಷಗಳಲ್ಲಿಯೇ ಅವಳ ಮೈಯೆಲ್ಲಾ ತಣ್ಣಗಾಗುತ್ತ ಬಂದಿತು. ಮಾತ ನಾಡಲು ಜ್ಞಾನ ಮತ್ತು ಚೈತನ್ಯವಿಲ್ಲದೆ ಮಾಯಾ ತಂದೆಯ ಮೇಲೆ ದೈನ್ಯ ಕಟಾಕ್ಷವನ್ನು ಬೀರಿ ಕಣ್ಣುಮುಚ್ಚಿಕೊಂಡಳು!

ರಕ್ತವನ್ನು ನೋಡಿ ಹುಚ್ಚನಂತಾದ ಆತ, ನಿಂತಿದ್ದ ತನ್ನ ಹೆಂಡತಿಯ ಕಡೆ ದುರದುರನೆ ನೋಡಿದನು. ಅವಳ ಮುಖದಲ್ಲಿ ಆಶ್ಚರ್ಯದಿಂದೊಡ ಗೂಡಿದ ಮುಗುಳುನಗೆಯಿತ್ತು. ಅವನ ಶೋಕಾಗ್ನಿಗೆ ಬಿರುಗಾಳಿ ಬೀಸಿ ದಂತಾಯಿತು. 'ಯಾರೇ ಆ ಗುರುದೇವ?' ಎಂದು ಆತ ಹೆಂಡತಿಯನ್ನು ಕೇಳಿದನು.

'ಹೇಳಿದೆನಲ್ಲಾ ಆ ಸಂನ್ಯಾಸಿ, ಇವಳ ಗುರು ಅವನೇ. ಆ ಕೇಡು ಮೋರೆಯ ಸಂನ್ಯಾಸಿಯ ದರ್ಶನದಿಂದಲೇ ಇವಳಿಗೆ ಈ ಪಾಡಾಯಿತು. ದೊರೆತನವನ್ನು, ಹೆಂಡತಿ-ಮಕ್ಕಳನ್ನು ಬಿಟ್ಟು ಕಾಡಿಗೆಹೋದ ಸಂನ್ಯಾಸಿಯ ಶಿಷ್ಯೆಗೆಲ್ಲಿ ಸುಖ ಬರುತ್ತೆ!'

'ಹಾ! ಯಾರು ಬುದ್ಧಗುರುವೇ?' ಎಂದು ನೆಟ್ಟ ದೃಷ್ಟಿಯಿಂದ ಹೆಂಡತಿಯನ್ನು ನೋಡಿ ಕೇಳಿದನು.

'ಬುದ್ಧನಂತೆ! ಶಾಕ್ಯವಂಶದಲ್ಲಿ ರಾಜನಾಗಿ ಹುಟ್ಟಿ ಸಂನ್ಯಾಸಿಯಾದ ಹುಚ್ಚ, ಈ ಹುಚ್ಚಳ ಗುರುವಂತೆ.'

'ಹುಚ್ಚಿ! ಬಾಯಿ ಮುಚ್ಚು. ನಿನಗೂ ಇವಳ ಗತಿಯೇ ಆದೀತು. ದೇವಪುರುಷನನ್ನು ಹಾಗೆ ಹೇಳದಿರು. ಪಿಶಾಚಿ! ಮೊದಲೇ ಏಕೆ ಬುದ್ಧ ಗುರುವು ಬಂದಿದ್ದಾನೆಂದು ಹೇಳದೆ ಯಾವನೋ ಸಂನ್ಯಾಸಿ ಬಂದು ಅಗ್ರಾಳ ವದ ಆಶ್ರಮದಲ್ಲಿ ಇಳಿದಿದ್ದಾನೆಂದೆ?' ಎಂದು ಕೋಪದಿಂದ ಎದ್ದು ತನ್ನ ಮುಷ್ಟಿಯನ್ನು ತೋರಿಸುತ್ತಾ ಹೆಂಡತಿಯ ಕಡೆ ನುಗ್ಗಿದನು. ಆಕೆ ಹೆದರಿ

ಆ ಸ್ಥಳದಿಂದ ' ಇವರಿಗೂ ಹುಚ್ಚು ಹಿಡಿದಿದೆಯೇ ! ' ಎಂದುಕೊಳ್ಳುತ್ತಾ ಭಯದಿಂದ ಓಡಿಹೋದಳು.

ಆಕೆ ಮನೆಯ ಹೊಸಲನ್ನು ದಾಟಿದೊಡನೆಯೇ ಆತ ಹೊಸಲ ಬಳಿ ತನ್ನ ಬಲವನ್ನು ತಡೆದು ನಿಂತನು; ಮಗಳ ಶವದ ಬಳಿ ನಿಂತು ಸುಮ್ಮನೆ ಅವಳ ಮುಖವನ್ನೇ ನೋಡುತ್ತಾ ಕಣ್ಣೀರು ಸುರಿಸಿದನು. ಮಾಯಾದೇವಿಯ ಶಾಂತವಾದ, ಭಾವರಹಿತವಾದ ಮುಖಮುದ್ರೆಯನ್ನು ನೋಡುತ್ತಾ, ' ಮಗಳೇ ! ನನ್ನನ್ನು ಕ್ಷಮಿಸು. ನೀನು ಹೋದ ದಾರಿಯಲ್ಲಿಯೇ ನಾನು ನಡೆಯುತ್ತೇನೆ ' ಎಂದು, ಮಗಳ ರಕ್ತಮಯವಾದ ಮುಖಕ್ಕೆ ತನ್ನ ಕಡೆಯ ಮುತ್ತನ್ನಿತ್ತು, ಆ ಕಗ್ಗತ್ತಲಿನಲ್ಲಿ, ತನ್ನ ಕಣ್ಣಿನ ಬೆಳಕಿನಿಂದಲೇ ಅಗ್ಗಾಳವದ ಆಶ್ರಮದ ಕಡೆ ನಡೆದನು.

೪

ಅಗ್ಗಾಳವ ಆಶ್ರಮ ಅಂದು ಪೂರ್ಣ ನಿಶ್ಯಬ್ದತೆಯಿಂದ ಇತ್ತು. ಭಿಕ್ಷುಗಳೆಲ್ಲಾ ನಿದ್ದೆ ಹೋಗಿದ್ದರು. ಮಧ್ಯರಾತ್ರಿಯಾದರೂ ಬುದ್ಧಗುರುವು ಧ್ಯಾನಮಂದಿರದಲ್ಲಿ ಸಮಾಧಿಯಲ್ಲಿದ್ದರು. ಅವರ ಪಕ್ಕದಲ್ಲಿ ಆನಂದರು ಎಂದೂ ಇಲ್ಲದ ಗುರುವಿನ ಅಂದಿನ ಸ್ಥಿತಿಯನ್ನು ಕಂಡು ಅವರನ್ನೇ ನೋಡುತ್ತಾ ಕುಳಿತಿದ್ದರು.

ಸಮಾಧಿಯಿಂದ ಎಚ್ಚತ್ತ ಗುರುದೇವರು ' ಆನಂದ ! ಏನು ಈ ದಿನ ಹೀಗಿರುವಿ ? ' ಎಂದು ಮೌನವನ್ನೊಡೆದರು.

' ಗುರುದೇವ ! ಇಂದಿನ ತಮ್ಮ ವರ್ತನೆಯನ್ನು ತಿಳಿಯುವುದು ಇಷ್ಟು ದಿನವೂ ತಮ್ಮ ಸೇವೆ ಮಾಡಿದ ಶಿಷ್ಯನಿಗೆ ತಿಳಿಯುವುದೂ ಅಸಾಧ್ಯವಾಗಿದೆ ' ಎಂದನು.

' ಏಕೆ ? '

' ಇದ್ದಕ್ಕಿದ್ದಂತೆಯೇ ಎಲ್ಲಾ ಭಿಕ್ಷುಗಳೊಡನೆ ಮೂವತ್ತು ಯೋಜನ ದೂರವಿರುವ ಈ ಆಶ್ರಮಕ್ಕೆ ಹೋಗಬೇಕೆಂದು ಜೇತವನದಲ್ಲಿ ಆಜ್ಞಾಪಿಸಿದಿರಿ ! '

' ಮೂರು ವರ್ಷಗಳ ಹಿಂದೆಯೇ ಇಲ್ಲಿಗೆ ಈ ದಿನ ಬರುವುದಾಗಿ ಹೇಳಿದ್ದೆಸಲ್ಲಾ. '

' ಹೌದು; ಹಾಗೆ ಹೇಳಿದುದೂ, ಬಂದುದೂ ನನಗೆ ಆಶ್ಚರ್ಯವನ್ನು ಉಂಟುಮಾಡಿದೆ. ಗುರುದೇವ ! ಇಂದು ಸಂಜೆ ಭಿಕ್ಷೆಯಾದ ಮೇಲೆ ಬಹಳ ಹೊತ್ತು ಕಾದಿದ್ದಿರಿ. ವಿಚಿತ್ರವಾದ ಉಪನ್ಯಾಸವಾಯಿತು ! '

' ಮಾಯಾದೇವಿಗಾಗಿಯೇ ನಾನಿಲ್ಲಿಗೆ ಇಂದು ಬಂದುದು, ಆನಂದ. ನಿನಗೆ ನೆನಪಿರಬಹುದು, ನಾನು ಮೂರುವರ್ಷಗಳ ಹಿಂದೆ ಇಲ್ಲಿನ ಜನರಿಗೆ ಕೊಟ್ಟ ಉಪದೇಶ. ಅಂದು ಅದನ್ನು ಗ್ರಹಿಸಿದವಳು ಆಕೆ. ಅದನ್ನು ಅಂದೇ ಅರಿತೆ. ನನಗೆ ಶಿಷ್ಯೆಯೊಬ್ಬಳು ದೊರೆತಳೆಂದು ಹಿಗ್ಗಿದೆ. ಬುದ್ಧನಾದ ದಿನ ಹಾಗೆ ಹಿಗ್ಗಿದ್ದೆ. ಆ ಹಿಗ್ಗು ಒಂದು ಕ್ಷಣಮಾತ್ರ ಇತ್ತು. ಅವಳ ಬಳಿಯಲ್ಲಿ ಮೃತ್ಯು ನಲಿಯುತ್ತಿದ್ದುದನ್ನು ಕಂಡೆ. ಆತ ಮೌನಿ ! ತನ್ನ ಮೌನದಿಂದಲೇ ತನ್ನ ಮೂರು ಬೆರಳುಗಳನ್ನು ತೋರಿಸಿ, ಆ ಅವಧಿಯಲ್ಲಿ ನನ್ನ ಶಿಷ್ಯೆಯನ್ನು ತನ್ನ ಶಿಷ್ಯೆಯನ್ನಾಗಿ ಮಾಡಿಕೊಳ್ಳುವುದಾಗಿ ಸೂಚಿಸಿದ ! ಇಂದೇ ಆಕೆಯ ಕಡೆಯ ದಿನ. ಆಕೆಗೆ ದೇವನಲ್ಲಿ ಸ್ಥಿರ ಭಕ್ತಿ ಇರುವಂತೆ, ನಿರಾಶಳಾಗದಂತಿರಲು, ಇಂದು ಆಕೆಗೆ ಮೋಕ್ಷಮಾರ್ಗದ ಪ್ರಥಮ ಸೋಪಾನವನ್ನು ತೋರಿಸಿಕೊಟ್ಟು, ಆಕೆ ತಾನು ನೋಡಿದ ಸಗ್ಗದ ಪಥದಲ್ಲಿ ಪ್ರಯಾಣ ಮಾಡಲು ಸಿದ್ಧಮಾಡಿದೆ. ಇಂದು ಆಕೆಯ ಸಹಾಯದಿಂದ ನಡೆದ ಬೋಧೆ ಜನದ ಮೇಲೆ ಬಹಳ ಪರಿಣಾಮಕಾರಿಯಾಗಿದೆ. ಆನಂದ, ಈ ಹೊತ್ತಿಗೆ ಆಕೆ ಮೃತ್ಯುವಿನ ಶಿಷ್ಯೆಯಾಗಿದ್ದಾಳೆ. '

' ಗುರುದೇವ ! ' ಎಂದು ಆನಂದರು ಬುದ್ಧಗುರುವಿನ ಪಾದಗಳನ್ನು ಮುಟ್ಟಿ ನಮಸ್ಕರಿಸಿದರು.

ಆಶ್ರಮದ ಬಾಗಿಲನ್ನು ಯಾರೋ ಆತುರದಿಂದ ಬಡಿಯುತ್ತಿದ್ದ ಧ್ವನಿ ಇಬ್ಬರಿಗೂ ಕೇಳಿಸಿತು. ' ಆನಂದ, ಶಿಷ್ಯನಾರೋ ಕಲಕಿದ ದುಃಖದ ಮನಸ್ಸಿನಿಂದ ಬಂದಿದ್ದಾನೆ. ಹೋಗಿ ಕರೆತಾ ' ಎಂದು ಗುರುದೇವರು ಹೇಳಿದರು.

ಆನಂದರು ಹೋಗಿ ಬಾಗಿಲನ್ನು ತೆರೆದರು. ಅಂಗಳದಿಂದ ಬರುತ್ತಿದ್ದ ಬೆಳಕಿನ ಕಿರಣಗಳು ಮುಸಕುಮುಸಕಾಗಿ ಆ ಆಗಂತುಕನನ್ನು ತೋರಿಸುವಂತೆ

ಮಾಡಿದುವು. ಬಟ್ಟೆಯೆಲ್ಲಾ ರಕ್ತಮಯವಾಗಿದ್ದ ಮನುಷ್ಯನನ್ನು ಆನಂದರು ನೋಡಿದೊಡನೆಯೇ ಆತ ಅವರ ಪಾದದ ಮೇಲೆ ಬಿದ್ದು, 'ಗುರುದೇವ, ಕಾಪಾಡಬೇಕು !! ' ಎಂದನು.

'ಬಾ, ತಮ್ಮಾ ! ಗುರುದೇವರ ಬಳಿಗೆ ಕರೆದುಕೊಂಡು ಹೋಗುತ್ತೇನೆ. ಅವರೂ ನಿನಗಾಗಿಯೇ ಕಾದಿದ್ದಾರೆ! ' ಎಂದು ಆನಂದರು ಹೇಳಿದರು.

ಆತ ಸುಮ್ಮನೆ ಆಶ್ಚರ್ಯದಿಂದ ಆನಂದರ ಕಡೆಗೇ ನೋಡಿ, ಏನೂ ಮಾತನಾಡದೆ ಅವರ ಹಿಂದೆ ನಡೆದು, ಧ್ಯಾನಮಂದಿರಕ್ಕೆ ಒಂದೊಡನೆಯೇ ಬುದ್ಧಗುರುಗಳ ಪಾದಗಳ ಮೇಲೆ ಬಿದ್ದು, ತನ್ನ ದುಃಖವನ್ನೆಲ್ಲಾ ವಿಶದವಾಗಿ ಅರುಹಿ 'ಗುರುದೇವ, ನನ್ನ ದುಃಖವನ್ನು ಕೊನೆಗಾಣಿಸಬೇಕು. ಅನುಗ್ರಹ ಮಾಡಬೇಕು. ' ಎಂದು ಬೇಡಿಕೊಂಡನು.

ಗುರುದೇವರು ಅವನ ದುಃಖವನ್ನು ಮೆಲುನುಡಿಗಳಿಂದ ಶಮನಪಡಿಸುತ್ತಾ, 'ಅನಂತವಾದ ಸಂಸಾರಸಾಗರದಲ್ಲಿ ಈಜುತ್ತಿರುವ ನೀನು ದುಃಖಪಡಬೇಡ. ಚತುಸ್ಸಾಗರಗಳನ್ನು ತುಂಬುವಷ್ಟು ಕಣ್ಣೀರನ್ನು ನೀನು ಇಂದು ಸುರಿಸಿದ್ದೀ. ತಮ್ಮಾ, ನೀನು ಪುಣ್ಯವಂತ. ಅದಕ್ಕೇ ಅಂತಹ ಮಗಳು ನಿನ್ನ ಮನೆಯಲ್ಲಿ ಜನಿಸಿ, ನಿನ್ನ ಮನಸ್ಸನ್ನು ಪರಿಪಾಕ ಮಾಡಿದ್ದಾಳೆ. ನೀನು ಬರಿಯ ಕೃತ್ಯವನ್ನು ಮಾಡಿದ ಗೊಂಬೆ. ಈ ದಿನ ಮೃತ್ಯು ಹೇಗಾದರೂ ಆಕೆಯನ್ನು ಶಿಷ್ಯೆಯನ್ನಾಗಿ ಮಾಡಿಕೊಳ್ಳುತ್ತಿದ್ದ. ದುಃಖಿಸಬೇಡ. ಆತ್ಮದ ಚಲನೆಗೆ ಆದಿ ಅಂತ್ಯಗಳಿಲ್ಲ. ' ಎಂದು ಉಪದೇಶಿಸಿದರು.

ದುಃಖವು ಗುರುದೇವನ ಬೋಧನೆಯಿಂದ ಶಮನವಾದ ಮೇಲೆ, ಆತನು 'ಗುರುದೇವ, ನನಗೆ ಶಿಷ್ಯಭಿಕ್ಷೆಯನ್ನು ನೀಡಬೇಕು. ' ಎಂದು ಬುದ್ಧಗುರುವನ್ನು ಕೇಳಿಕೊಂಡನು.

ಬುದ್ಧಗುರುವು ಆತನ ಕರ್ಮಪರಿಪಾಕವನ್ನರಿತು, ನೆಟ್ಟಗೆ ಆತನನ್ನು ಅರ್ಹತ್ ಭಿಕ್ಷುವಾಗಿ ಮಾಡಿದರು.

—

# ನಂಜಮ್ಮ

೧

ಅನಂತಸ್ವಾಮಿ ಸುಂದರಮೂರ್ತಿ ಇಬ್ಬರೂ ಮಾರ್ಕೆಟ್ಟಿನ ಮುಂದೆ ಬರುವ ವೇಳೆಗೆ ಮಾರ್ಕೆಟ್ಟಿನ ಚೌಕದ ಗಡಿಯಾರದಲ್ಲಿ ಏಳು ಗಂಟೆ ಹೊಡೆಯಿತು. ನಿಯಾನ್ ' ಅಡ್ವರ್‌ಟೈಸ್‌ಮೆಂಟಿನ ' ದೀಪಗಳಿಂದ ಮಾರ್ಕೆಟ್ಟಿನ ಮುಂದಿದ್ದ ಸಯಾಜಿರಾವ್ ರಸ್ತೆಯಲ್ಲಿನ ಅಂಗಡಿಗಳು ಬೆಳಗುತ್ತಿದ್ದುವು. ಅನಂತಸ್ವಾಮಿ ಸುತ್ತಮುತ್ತ ನೋಡಿದನು; ಲ್ಯಾನ್ಸ್‌ಡೌನ್ ಕಟ್ಟಡಗಳ ಕಡೆ ಐದು ನಿಮಿಷ ನೋಡಿದನು. ಬೇಗ ರೂಮಿಗೆ ಹೋಗುವ ಉತ್ಸುಕತೆಯಿದ್ದ ಸುಂದರಮೂರ್ತಿಗೆ ' ಮೂರ್ತಿ, ಮಾರ್ಕೆಟ್ಟಿನೊಳಕ್ಕೆ ಹೋಗಿ ವೀಳೆಯದೆಲೆ ತೆಗೆದುಕೊಂಡು ಹೋಗಬೇಕು ' ಎಂದು ಹೇಳಿದನು.

ಮನಸ್ಸಿಲ್ಲದಿದ್ದರೂ ಮೂರ್ತಿಯು ' ಆಗಲಿ ' ಎಂದನು.

ಇಬ್ಬರೂ ಮಾರ್ಕೆಟ್ಟಿನೊಳಕ್ಕೆ ಹೋದರು.

ಮಾರ್ಕೆಟ್ಟಿನ ಎಡಗಡೆಯ ಕೊನೆಯ ಸಾಲೇ ವೀಳೆಯದೆಲೆ ಮಾರುವ ಸ್ಥಳ. ಅದರ ಮುಂದಿನದು ಹೂ ಮಾರುವ ಸ್ಥಳ. ಅದರ ಪಕ್ಕದಲ್ಲಿರುವುದು ಈರನಗೆರೆ ಬದನೆಕಾಯಿ ಮಾರುವ ಸ್ಥಳ. ಮೈಸೂರಿನಿಂದ ಹೊರಗಡೆ ಹೋದವರೆಲ್ಲರೂ ಈ ಮೂರು ವಸ್ತುಗಳನ್ನು ಸಾಧಾರಣವಾಗಿ ತೆಗೆದುಕೊಂಡು ಹೋಗುವರು.

ವೀಳೆಯದೆಲೆ ಮಾರುವ ಸಾಲಿನ ಕೊನೆಯಲ್ಲಿ ಅನಂತಸ್ವಾಮಿ ನೋಡಿದ. ತನ್ನ ವೀಳೆಯದೆಲೆ ಮಾರುವವಳು ಇನ್ನೂ ಬಂದಿರಲಿಲ್ಲ. ಸುತ್ತ ಮುತ್ತ ನೋಡಿದ.

'ಯಾರ ಹತ್ತಿರಲಾದರೂ ಬೇಗ ವೀಳೆದೆಲೆ ತೆಗೆದುಕೋ ಸಾಮಿ' ಎಂದು ಮೂರ್ತಿ ಹೇಳಿದ. ಮೂರ್ತಿಗೆ ಯಾರ ಬಳಿ ವೀಳೆಯದೆಲೆ ತೆಗೆದು ಕೊಂಡರೂ ಒಂದೇ ಎಂದು. ಅನಂತಸಾಮಿ 'ತೆಗೆದುಕೊಳ್ಳೋಣವಂತೆ. ಹಾಗೆಯೇ ಎರಡು ಟೊಮ್ಯಾಟೊ ಹಣ್ಣು ತೆಗೆದುಕೊಂಡು ಬರೋಣ, ಎಂದು ಮೂರ್ತಿಯನ್ನೂ ತರಕಾರಿ ಮಾರುವ ಕಡೆಗೆ ಕರೆದುಕೊಂಡು ಹೋದ. ಅಲ್ಲಿ ಹಾಗೂ ಹೀಗೂ ವ್ಯಾಪಾರ ಮಾಡಿ ಆರು ಟೊಮ್ಯಾಟೊ ಹಣ್ಣು ತೆಗೆದುಕೊಂಡದ್ದಾಯಿತು. ಅವುಗಳಲ್ಲಿ ಮೂರನ್ನು ಮೂರ್ತಿಗೆ ಕೊಟ್ಟು, 'ತೆಗೆದುಕೋ ಮೂರ್ತಿ, ಇದರಲ್ಲಿ ವೈಟಮಿನ್ ಬಹಳ ಇದೆ. ಎ ಬಿ. ಸಿ ಡಿ. ಎಲ್ಲಾ ಇದೆ' ಎಂದ. 'ನಿನಗೆ ಬೇಕಾದುದಿನ್ನೇನು—ವೈ, ವೈಟಮಿನ್, ವ್ಯಾಯಾಮ ಶಾಲೆ' ಎಂದು ಮೂರ್ತಿ ನಗುತ್ತಾ ಹಣ್ಣನ್ನು ಫಲಹಾರ ಮಾಡಿದ. ಇಬ್ಬರೂ ಹಣ್ಣು ಮುಗಿಸಿದ ಮೇಲೆ ಪುನಃ ವೀಳೆಯ ದೆಲೆ ಮಾರುವ ಸ್ಥಳಕ್ಕೆ ಬಂದರು. ಮಾರ್ಕೆಟ್ಟಿನ ಗಡಿಯಾರದಲ್ಲಿ ಏಳೂವರೆ ಹೊಡೆಯಿತು.

'ಸಾಮಿ, ಈ ದಿನ ಯಾರ ಹತ್ತಿರಲಾದರೂ ವೀಳೆಯದೆಲೆ ತೆಗೆದುಕೋ. ಜಾಗ್ರತೆ ಹಾಸ್ಟೆಲಿಗೆ ಹೋಗಬೇಕು. ಈ ಹೊತ್ತು ಈರುಳ್ಳಿ ಹುಳಿ. ಹೊತ್ತಾದರೆ ಹೋಳುಗಳಿಗೆ ಏಕಾದಶಿ! ನಿನಗೇನೊ ಪರವಾಯಿಲ್ಲ, ಅಮ್ಮಾ ಅವರು ಕಾದಿರುತ್ತಾರೆ. ಯಾವಾಗ ಹೋದರೂ ಪುಷ್ಕಳವಾದ ಊಟ' ಎಂದು ಮೂರ್ತಿ ನಸುನಗುತ್ತಾ ಹೇಳಿದನು.

'ಏನು ಊಟವೋ, ಏನು ಪುಷ್ಕಳವೋ!' ಎಂದು ಒಂದು ತರಹ ನಿರಾಶೆಯಿಂದ ಸಾಮಿ ಹೇಳಿ, ಮನಸ್ಸಿಲ್ಲದಿದ್ದರೂ ಮೂರ್ತಿಯ ಗಲಾಟೆ ಗಾಗಿ ವೀಳೆಯದೆಲೆಯನ್ನು ಬೇಗ ತೆಗೆದುಕೊಂಡು ಹೋಗೋಣವೆಂದು ಅಲ್ಲಿದ್ದ ವೀಳೆಯದೆಲೆ ಮಾರುತ್ತಿದ್ದ ಒಬ್ಬ ಹುಡುಗಿಯ ವೀಳೆಯದೆಲೆಯ ಮಕ್ಕರಿಗೆ ಕೈ ಹಾಕಿ, 'ಹೇಗವ್ವ ವೀಳೆಯದೆಲೆ?' ಎಂದು ಕೇಳಿದನು.

'ಚಿಗುರು ಬುದ್ದಿ. ಕಟ್ಟು, ಮೂರೇ ಆಣೆ.' ಎಂದು ಆ ಹುಡುಗಿ ಕೊಂಕಿ ನುಡಿದಳು.

'ಆ ವೀಳೆಯದೆಲೆ ಅವಳಷ್ಟು ಕೂಡ ಮೆತ್ತಗೆ ಬೆಳ್ಳಗಿಲ್ಲ, ಬುದ್ದಿ!'

ಎಂದು ಸಾಲಿನ ಹಿಂದಿನಿಂದ ಬಂದು ಮುಂದೆ ಮುಕ್ಕರಿಯನ್ನು ಕೆಳಗಿಳಿಸು ತ್ತಿದ್ದ ವೀಳೆಯದೆಲೆಯಾಕೆ ಹೇಳಿದಳು.

ಹುಡುಗಿಗೆ ಕೋಪ ಬಂದಿತು. ತಿರುಗಿ, ಅಂದವಳ ಕಡೆ ನೋಡಿ, ' ನೀನು ದಾಯಾದೀನಾ ! ' ಎಂದು ಬುಸುಗುಟ್ಟಿದಳು.

' ಇಲ್ಲ ನನ್ನಮ್ಮ, ಯಾಕೆ ಹಾಗೆ ಕೋಪ ಮಾಡಿಕೋತೀಯೇ. ನಮ್ಮ ಬುದ್ಧಿಯೋರು ನಿನ್ನ ನೋಡಿ ವೀಳೆಯದೆಲೆ ಕೇಳೋದಕ್ಕೆ ಬಂದರು. ಅದಕ್ಕೆ ಹಾಗೆ ಹೇಳಿದೆ ' ಎಂದಳು.

ಮೂರ್ತಿ ಈ ರಸಿಕೆಯ ಕಡೆ ನೋಡಿದ. ಸುಮಾರು ಐವತ್ತು ವರ್ಷ ದಾಟಿ. ಐವತ್ತು ವರ್ಷಗಳಾದರೂ ಗಟ್ಟಿಯಾಗಿದ್ದಳು. ಅದು ಆಕೆ ಹೊತ್ತು ತಂದ ದೊಡ್ಡ ಮುಕ್ಕರಿಯನ್ನು ನೋಡಿದರೆಯೇ ಗೊತ್ತಾಗುತ್ತಿತ್ತು. ಅಗಲ ವಾದ ಮುಖ. ಮುಖಕ್ಕೆ ತಕ್ಕ ಮೈ. ಕೈಗಳಲ್ಲಿ ಚಿನ್ನದ ಗೊಲಸುಗಳು. ಕಿವಿಯಲ್ಲಿ ದೊಡ್ಡ ಕೆಂಪಿನ ಓಲೆ. ಉಟ್ಟಿದ್ದುದು ಧರ್ಮಾವರದ ಸೀರೆ ಕುಪ್ಪಸಗಳು. ನಡುವಿನಲ್ಲಿ ಗೆಜ್ಜೆಯ ಬಂಗಾರದ ಡಾಬು.

ಅನಂತಸ್ವಾಮಿ ನೆಟ್ಟಗೆ ಆಕೆಯ ಬಳಿ ಹೋದ. ಆಕೆ ತನ್ನ ಮುಕ್ಕರಿ ಯಿಂದ ಒಂದು ಸಣ್ಣ ವೀಳೆಯದೆಲೆಯ ಕಟ್ಟನ್ನು ಕೊಟ್ಟಳು. ಅದರಲ್ಲಿ ಸುಮಾರು ಇಪ್ಪತ್ತೈದು ವೀಳೆಯದೆಲೆ ಇರಬಹುದು. ಸ್ವಾಮಿ ಅದನ್ನು ಮೂರ್ತಿಯ ಕೈಗೆ ಕೊಟ್ಟು, ' ಹೇಗಿದೆ ನೋಡು, ಮೂರ್ತಿ ! ಈ ಊರಲ್ಲಿ ಇಂತಹ ವೀಳೆಯದೆಲೆ ಯಾರ ಹತ್ತಿರಲೂ ಇರುವುದಿಲ್ಲ. ' ಎಂದು ಆಕೆಗೆ ಅದರ ಬೆಲೆಯಾಗಿ ಮೂರು ಕಾಸು ಕೊಟ್ಟನು.

' ಈ ಬುದ್ಧಿಯೋರು ಯಾರು ಬುದ್ಧಿ ? ' ಎಂದು ಆಕೆ ಅನಂತಸ್ವಾಮಿ ಯನ್ನು ಕೇಳಿದಳು.

' ಇವರು ಬೆಂಗಳೂರಿನವರು, ನಂಜಮ್ಮ. ಇಲ್ಲೇ ಕಾಲೇಜಿನಲ್ಲಿ ಎಂ. ಎ. ಗೆ ಓದುತ್ತಿದ್ದಾರೆ. ಈ ವರ್ಷ ಪರೀಕ್ಷೆಗೆ ಕಟ್ಟುತ್ತಾರೆ. ಇವರ ಮಾವ ಬಹು ದೊಡ್ಡ ಜಮೀನ್‌ದಾರರು. ಅವರಿಗೆ ಬೆಂಗಳೂರಿನಲ್ಲೇ ಐದಾರು ಮನೆಗಳಿವೆ. ಮನೆ ಬಾಡಿಗೆಯೇ ತಿಂಗಳಿಗೆ ಇನ್ನೂರು ರೂಪಾಯಿ ಮೇಲೆ ಬರುತ್ತೆ. '

'ಆಗಲಿ ನನ್ನಪ್ಪ. ಎಂದೂ ಈ ಕಡೆ ವೀಳೆದೆಲೆಗೆ ಬರಲೇ ಇಲ್ಲ?' ಎಂದು ಮೂರ್ತಿಯನ್ನು ನೋಡುತ್ತ ನಂಜಮ್ಮ ಹೇಳಿದಳು.

'ನನಗೆ ಯಾಕಮ್ಮ ವೀಳೆದೆಲೆ? ಅದಕ್ಕೆ ಅಡಿಕೆ ಸುಣ್ಣ ಎಲ್ಲಾ ಎಲ್ಲಿ ಹವಣಿಸಲಿ. ಮನೆ ಮಾಡಿದರೆ ಆಗ ಆ ಮಾತು' ಎಂದು ಮೂರ್ತಿ ನಂಜಮ್ಮನಿಗೆ ಹೇಳಿದನು.

'ಬೇಗ ಮನೆ ಮಾಡು ನನ್ನಪ್ಪ. ಅನಂತಸ್ವಾಮಿಯವರ ಮನೇಲಿ ಹಬ್ಬ ಹುಣ್ಣಿಮೇಲಿ ತಿಂಡಿ ಕೊಡೋ ಹಾಗೆ ನೀನೂ ನಂಗೆ ತಿಂಡಿ ಕೊಡು. ಪಾರ್ವತಮ್ಮನಿಗೆ ಅನಂತಸ್ವಾಮಿಯವರ ಹಾಗೇನೇ ನನ್ನ ಕಂಡರೆ ಒಲು ಇಷ್ಟ ನನ್ನೊಡೆಯ. ಈ ಊರ ದೊಡ್ಡ ದೊಡ್ಡ ಅರಸುಗಳಿಗೆಲ್ಲಾ ನಾನೇ ವೀಳೆದೆಲೆ ಕೊಡುತ್ತೇನೆ ನಾಲ್ಕು ತೋಟ ಇದೆ ನನಗೆ ಬುದ್ಧಿ. ಬನ್ನಿ ಒಂದು ಸಲ ತೋಟಕ್ಕೆ.'

'ಏನಿದೆ ನಿನ್ನ ತೋಟದಲ್ಲಿ, ನಂಜಮ್ಮ?' ಎಂದು ಮೂರ್ತಿ ಕೇಳಿದ.

ನಂಜಮ್ಮನ ಮಾತಿನ ಸರಣಿ, ಆಕೆ ಜನದಲ್ಲಿ ವಿಶ್ವಾಸ ಹುಟ್ಟಿಸುವ ರೀತಿಯನ್ನು ನೋಡಿ, ಮೂರ್ತಿಗೂ ಆಕೆಯ ವಿಚಾರ ತಿಳಿದುಕೊಳ್ಳುವ ಕುತೂಹಲವಾಯಿತು.

'ಫರಂಗಿ ಹಣ್ಣು ತುಂಬ ಇದೆ. ಗುಲಾಬಿ, ಜಾಜಿ, ಸುಗಂಧರಾಜ, ಪಚ್ಚೆತೆನೆ, ಮಲ್ಲಿಗೆ, ಎಲ್ಲಾ ಹೂಗಿಡಗಳೂ ಇವೆ. ಗೋವಾ ನೀಬೆ ಇದೆ. ಎಲ್ಲಾ ಗಿಡಗಳೂ ಇವೆ ಬುದ್ಧಿ' ಎಂದು ಹೇಳಿ, ಮೂರ್ತಿಗೂ ವೀಳೆಯ ದೆಲೆಯ ಸಣ್ಣ ಕಟ್ಟೊಂದನ್ನು ಕೊಟ್ಟಳು.

'ಯಾಕೆ ನಂಜಮ್ಮ ಇದು ನನಗೆ?'

'ಪರವಾ ಇಲ್ಲ, ತೆಗೆದುಕೊಂಡು ಹೋಗಿ ಬುದ್ಧಿ.'

'ಬೆಂಗಳೂರಿಗೆ ಹೋಗುವಲ್ಲಿ ತೆಗೆದುಕೊಂಡು ಹೋಗುತ್ತೇನೆ ನಂಜಮ್ಮ; ಈಗ ಬೇಡ.'

'ಆಗ ಒಳ್ಳೆ ಪುರವಾಯಿಸಿ ಎಲೆ ಕಟ್ಟಿಕೊಡ್ತೇನೆ ಬುದ್ಧಿ. ಈ ಮಾರ್ಕೆಟ್ಟಿನಲ್ಲೇ ನೋಡದ ಎಲೆ. ಈಗ ಇದ ನೋಡಿ ಹೇಗಿದೆಯೋ!'

ಅನಂತಸ್ವಾಮಿ 'ತೆಗೆದುಕೋ ಮೂರ್ತಿ' ಎಂದ. 'ಇದಕ್ಕೆ ಅಡಿಕೆ ಸುಣ್ಣ ಎಲ್ಲಿ ತರಲಯ್ಯ?' ಎಂದು ಮೂರ್ತಿ ಕೇಳಿದ.

' ನಾನು ಕೊಡುತ್ತೇನೆ. '

' ರಾತ್ರಿ ಸುಣ್ಣ ಕೊಡಕೂಡದಯ್ಯಾ. '

' ಪರವಾ ಇಲ್ಲ. ನೀನೂ ನಾನೂ ಒಂದೇ. ನೀನೂ ನಮ್ಮ ಮನೆ ಯವನ ಹಾಗೆಯೇ. '

ಮೂರ್ತಿಗೆ ಮಾತು ಮುಂದುವರಿಸಲಾಗಲಿಲ್ಲ. ನಂಜಮ್ಮ ಕೊಟ್ಟ ವೀಳೆಯದೆಲೆಯ ಕಟ್ಟನ್ನು ತೆಗೆದುಕೊಂಡ. ಜೇಬಿನಿಂದ ಹಣ ತೆಗೆದು ಕೊಡಲು ಕೈ ಹಾಕಿದ.

' ಇದಕ್ಕೆ ಏನೂ ಕೊಡಬೇಡಿ ಬುದ್ಧಿ. ಹೇಗಿದೆಯೋ ನೋಡಿ ಆ ಮೇಲೆ ನನ್ನ ಹತ್ತಿರ ವೀಳೆದೆಲೆ ತೆಗೆದುಕೊಳ್ಳಿ. ಹಾಸ್ಟೆಲಿನಲ್ಲಿ ಎಲ್ಲಿ ಬುದ್ಧಿ ಇರೋದು ? ' ಎಂದು ನಂಜಮ್ಮ ಮೂರ್ತಿಯನ್ನು ಕೇಳಿದಳು.

' ಗೇಟಿನ ಬಳಿ ಇರುವ ಮೊದಲನೆಯ ರೂಂ. '

' ಓ ! ನೋಡಿದ್ದೇನೆ ಬುದ್ಧಿ. ಯಾವಾಗಲಾದರೂ ಅನಂತಸ್ವಾಮಿ ಅವರಿಗೆ ಫರಂಗಿ ಹಣ್ಣು ತಂದು ಕೊಡೋವಲ್ಲಿ ನಿಮಗೂ ತಂದು ಕೊಡು ತ್ತೀನಿ. ಅಮ್ಮಾವ್ರು ಎಂದು ಬರ್‍ತಾರೆ ಬುದ್ಧಿ ಈ ಊರಿಗೆ ? '

' ಈ ಸಲ ಪ್ಯಾಸಾದರೆ ಕಾನ್ವೊಕೇಷನ್ನಿಗೆ ಕರೆದುಕೊಂಡು ಬರ್‍ತೀನೆ, ನಂಜಮ್ಮ. '

' ಪ್ಯಾಸಾಗದೆ ಏನು ಬುದ್ಧಿ. ನಿಮ್ಮ ಮುಖ ನೋಡಿದ್ರೆ ದೇವರಾಗೆ ಇದ್ದೀರಿ. ಈ ಸಲ ಪ್ಯಾಸೂ ಆಗುತ್ತೆ, ಮೆಡಲ್ಲೂ ಬರುತ್ತೆ. ಅಮ್ಮಾವ್ರನ್ನ ಕರತಂದ್ರೆ ಮರೀದೆ ನನ್ನ ತೋಟಕ್ಕೆ ನೀವೆಲ್ಲಾ ಬರಬೇಕು, ಬುದ್ಧಿ. '

' ಆಗಲಿ ' ಎಂದ ಮೂರ್ತಿ. ಅಂದಿನ ಆ ಮುದುಕಿಯ ವಿಶ್ವಾಸವನ್ನು ನೋಡಿ ಮೂರ್ತಿಗೆ ಬಹಳ ಆಶ್ಚರ್ಯವಾಯಿತು. ಅನಂತಸ್ವಾಮಿ ಆ ಸಣ್ಣ ಕಟ್ಟು ವೀಳೆಯದೆಲೆಗೆ ಕಾದಿದ್ದುದು ಆಗ ಮೂರ್ತಿಗೆ ಅರ್ಥವಾಯಿತು. ' ಬರುತ್ತೇವೆ, ನಂಜಮ್ಮಾ ' ಎಂದು ಹೇಳಿ, ಇಬ್ಬರೂ ಹೊರಟರು.

ಬರುತ್ತಿರುವಲ್ಲಿ ' ಇಷ್ಟು ವೀಳೆದೆಲೆ ನಿಮ್ಮ ಮನೆಗೆ ಸಾಕಾ ? 'ಎಂದು ಮೂರ್ತಿ ಸ್ವಾಮಿಯನ್ನು ಕೇಳಿದನು.

' ಇದು ನಮ್ಮಿಬ್ಬರಿಗೆ ಮಾತ್ರ ' ಎಂದು ಅನಂತಸ್ವಾಮಿ ನಸುನಗುತ್ತ ಹೇಳಿದ.

'ಮನೆಯಲ್ಲಿ ನಿಮ್ಮ ತಂದೆ ತಾಯಿ ಎಲ್ಲಾ ಇಲ್ಲವೇ ?'

'ಇದ್ದಾರೆ ಮೂರ್ತಿ. ಅವರಿಗೆ ಇದೆಲ್ಲಾ ಬೇಕಿಲ್ಲ. ನಮ್ಮ ತಂದೆಗೆ ಹಣವೊಂದನ್ನು ಸೇರಿಸಿಟ್ಟರೆ ಸಾಕು. ಅವರಂತೆಯೇ ಇರುವ ನನ್ನ ತಮ್ಮ ನನ್ನು ಕಂಡರೆ ಅವರಿಗೆ ಪ್ರೀತಿ. ನನ್ನ ತಮ್ಮನಿಗೆ ದೇವರು ಬುದ್ಧೀನ ಕೊಟ್ಟಿದ್ದಾನೆ. ಮೆಟ್ರಿಕ್‌ನಲ್ಲಿ ಫಸ್ಟ್‌ಕ್ಲಾಸ್. ಅವನ ಹಾಗೆ ಬರಿ ಎರಡು ಅನ್ನದಲ್ಲಿ ಇರಲಾಗುತ್ತದೆಯೆ ಮೂರ್ತಿ? ಅದಕ್ಕೆ ಸರಿಯಾಗಿ ಅವನ್ನ ನೋಡು, ಕೋಲಿನಂತೆ ಇದ್ದಾನೆ.'

'ಹೌದಪ್ಪ; ನಿನ್ನಂತೆ ಹರ್ಕ್ಯುಲೀಸ್ ಆಗಿರೋದಕ್ಕೆ ಎಲ್ಲರಿಂದಲೂ ಆಗುತ್ತದೆಯೇ ? ನೀನು ಸುಮ್ಮನೆ ಇಂಟರಿನಲ್ಲಿ ಫೈಲಾಗುತ್ತಿದ್ದೀ, ಅದಕ್ಕೇ ನಿಮ್ಮಪ್ಪನಿಗೆ ನಿನ್ನ ಮೇಲೆ ಕೋಪ. ಇನ್ನೊಬ್ಬ ಮಗ ಅವರಂತೆಯೇ ಲಾಯರಲ್ಲದೆ ಹೋದರೆ ಬ್ಯಾರಿಸ್ಟರ್ ಆಗುತ್ತಾನೆ.'

'ಆಗುತ್ತಾನೆ ಮಂಕ. ಪ್ರಪಂಚಜ್ಞಾನವೇ ಇಲ್ಲ ಅವನಿಗೆ. ನಮ್ಮಪ್ಪನಿಗೆ ತಾನೆ ಹಣ ಕೋರ್ಟು ಎರಡು ಬಿಟ್ಟರೆ ನಾಲ್ಕು ಜನದ ಹತ್ತಿರ ಮಾತನಾಡೋದು ಕೂಡ ಸರಿಯಾಗಿ ಬರೋದಿಲ್ಲ, ಮೂರ್ತಿ!'

'ಅದೆಲ್ಲಾ ಸರಿ ಸ್ವಾಮಿ ನಿನಗೆ ಇದಕ್ಕೆಲ್ಲಾ ಹಣ ಎಲ್ಲಿಂದ ಬರುತ್ತೆ?'

'ನಮ್ಮ ಮಾವ ತಿಂಗಳಿಗೆ ನನಗೆ ಹತ್ತು ರೂಪಾಯಿ ಕಳಿಸ್ತಾರೆ. ಒಂಭತ್ತು ರೂಪಾಯಿ ಫೀ ಆಯಿತು. ಒಂದು ರೂಪಾಯಿ ಇನ್‌ಸ್ಟಿಟ್ಯೂಟಿನ ಫೀ'

'ವೀಳೆಯದೆಲೆ, ಹೋಟಲು ಇವಕ್ಕೆಲ್ಲಾ ?'

'ಹೋದಾಗಲೆಲ್ಲ ನಮ್ಮಾಕೆಗೆ ಐದೋ ಹತ್ತೋ ಅವರಪ್ಪ ಕೊಡ್ತಾರೆ. ಅದು ನನಗಾಗುತ್ತೆ.'

'ಒಳ್ಳೆ ಭೂಪನಯ್ಯಾ!'

'ಏನು ಮಾಡೋದು, ಮೂರ್ತಿ? ನನ್ನ ಹಣೆಬರಹ. ಆಕೆಯೂ ಅದೇ ಹೇಳ್ತಾಳೆ. 'ಹೇಗಾದರೂ ಮಾಡಿ ಈ ಸಲ ಇಂಟರ್ ಪ್ಯಾಸು ಮಾಡಿಬಿಡಿ. ಆಮೇಲೆ ಡಿಗ್ರಿ ಹೇಗಾದರೂ ಬರುತ್ತೆ' ಎಂದು. ಎರಡು ಸಲವೂ ಆ ಹಾಳು ಇಂಗ್ಲೀಷ್ ಕನ್ನಡ ಇವೆರಡರಲ್ಲಿಯೇ ಹೋಗುತ್ತಿದೆ, ಮೂರ್ತಿ!

ಈ ಸಲ ದೇವರ ಹಾಗೆ ನನ್ನ ಭಾವನ ಅನುಗ್ರಹದಿಂದ ನಿನ್ನ ಸ್ನೇಹ ಆಗಿದೆ. ಅವೆರಡರಲ್ಲಿಯೂ ಹತ್ತು ಹತ್ತು ಎಸ್ಸೇಗಳನ್ನ ಬರೆದು ಕೊಟ್ಟುಬಿಡು. ಉರು ಹಚ್ಚಿ ಇಳಿಸಿಬಿಡುತ್ತೇನೆ. '

ಮೂರ್ತಿ ನಸುನಕ್ಕ. ತನ್ನ ಮತ್ತು ಅವನ ವೀಳೆಯದೆಲೆ ಕಟ್ಟುಗಳನ್ನು ಸ್ವಾಮಿಯ ಕೈಗೇ ಕೊಟ್ಟು, 'ಹೊತ್ತಾಯ್ತು, ಬರ್ತೇನೆ. ಆಗಲೇ ಎಂಟೂವರೆಯಾಯಿತು. ಎರಡನೇ ಪಂಕ್ತಿಗೂ ಲೇಟಾದರೆ ಕಷ್ಟ! ' ಎಂದ.

'ವೀಳೆಯದೆಲೆ ತೆಗೆದುಕೊಂಡು ಹೋಗು, ಮೂರ್ತಿ. ಮನೇಗೆ ಹೋಗಿ ಅಡಿಕೆಪುಡಿ ಸುಣ್ಣ ತಂದು ಕೊಡ್ತೇನೆ' ಎಂದು ಅನಂತ ಹೇಳಿದ.

'ಈಗ ಬೇಡ. ನೀನೇ ಇದನ್ನು ತೆಗೆದುಕೋ' ಎಂದು ಮೂರ್ತಿ ಹೇಳಲು, ಅನಂತ ಮರುಮಾತನಾಡದೆ ಎರಡು ಕಟ್ಟುಗಳನ್ನೂ ಕೈಯಲ್ಲಿ ಹಿಡಿದು, ಮನೆಯ ಮೆಟ್ಟಿಲ ಮೇಲೆ ಕಾಲಿಟ್ಟು, 'ಆದಷ್ಟು ಬೇಗ ಎಸ್ಸೇಗಳನ್ನು ಬರೆದುಕೊಡಬೇಕು, ಮೂರ್ತಿ. ನಮಸ್ಕಾರ' ಎಂದ.

ಬಾಗಿಲು ತೆರೆಯಿತು. ಬಳೆ ಸದ್ದು ಕೇಳಿಸಿತು.

ಮೂರ್ತಿ ಸ್ವಾಮಿಯ ಕಡೆ ನೋಡುತ್ತಾ ನಸುನಕ್ಕು ಕಾಲೇಜು ಹಾಸ್ಟೆಲಿನ ಕಡೆ ಹೊರಟನು.

## ೨

ಸುಂದರಮೂರ್ತಿ ಬಡತನದಲ್ಲಿ ಬೆಳೆದು ಬಂದವನು. ಮೆಟ್ರಿಕ್ ಪರೀಕ್ಷೆಯ ವರೆಗೂ ವಾರಾನ್ನದಲ್ಲಿ ಬೆಳೆದೇ ಆ ಪರೀಕ್ಷೆಯಲ್ಲಿ ಮೊದಲನೆಯ ವರ್ಗದಲ್ಲಿ ತೇರ್ಗಡೆ ಹೊಂದಿದನು. ಆಮೇಲೆ ಬಿ. ಎ. ಪ್ಯಾಸಾಗುವ ವರೆಗೂ ಬೆಂಗಳೂರಿನ ಶ್ರೀರಾಮಕೃಷ್ಣ ವಿದ್ಯಾರ್ಥಿಮಂದಿರದಲ್ಲಿ ಇದ್ದನು. ಬಿ. ಎ. ಆದ ಮೇಲೆ ಅವರ ದೂರದ ಬಂಧುವಾದ ಶ್ರೀಮಂತ ಹಿರಿಯಣ್ಣಯ್ಯನವರ ಕಣ್ಣಿಗೆ ಬಿದ್ದನು.

ಶ್ರೀಮಂತ ಹಿರಿಯಣ್ಣಯ್ಯನವರು ಆದಿಯಿಂದಲೂ ಬಹು ಪುಣ್ಯವಂತರು. ದೊಡ್ಡ ಆಸ್ತಿ. ವರ್ಷಕ್ಕೆ ಸುಮಾರು ಇಪ್ಪತ್ತು ಸಾವಿರದಷ್ಟು ಉತ್ಪತ್ತಿ

ಯಿತ್ತು. ಇಷ್ಟು ಐಶ್ವರ್ಯಕ್ಕೂ ಅಧಿಕಾರಿಣಿಯಾಗಿ ಅವರಿಗೂ ಅವರ ಹೆಂಡತಿ ರುಕ್ಮಿಣಿಯಮ್ಮನವರಿಗೂ ಒಂದೇ ಒಂದು ಕಣ್ಣಿನಂತಿದ್ದಳು ನಳಿನಿ.

ನಳಿನಿ ತಂದೆ ತಾಯಿಗಳ ಮೆಚ್ಚಿನ ಮಗಳು ಅವಳನ್ನು ಸದಾ ಮನೆಯಲ್ಲಿಯೇ ಇಟ್ಟುಕೊಂಡಿರಬೇಕೆಂದೇ, ತಂದೆ ತಾಯಿ ಯಾರೂ ಇಲ್ಲದೆ ಅನಾಥನಾದ ಬುದ್ಧಿವಂತನಾದ ಸುಂದರಮೂರ್ತಿಗೆ ಆಕೆಯನ್ನು ವಿವಾಹ ಮಾಡಿಕೊಟ್ಟಿದ್ದರು. ಆಕೆ ಮೆಟ್ರಿಕ್ ಪರೀಕ್ಷೆಗೆ ಓದುತ್ತಿದ್ದಳು.

ಸುಂದರಮೂರ್ತಿಯನ್ನು ಲಾಯರಾಗಿ ಮಾಡಿಸಬೇಕೆಂದು ಹಿರಿಯಣ್ಣಯ್ಯನವರ ಆಸೆ ಆದರೆ ಆತ ಕನ್ನಡ-ತಾಯಿಯ ಸೇವೆ ಮಾಡಲು ಕನ್ನಡ ಎಂ ಎ. ಪರೀಕ್ಷೆಗೆ ಓದಲು ಬಿ. ಎ. ಆದ ಮೇಲೆ, ಮದುವೆಯಾಗಿ ಮಾವನ ಸಹಾಯವಿರಲು, ಮೈಸೂರಿಗೆ ಹೋಗಿ ಕಾಲೇಜಿನ ಹಾಸ್ಟೆಲಿನಲ್ಲಿ ಪುಣ್ಯವಂತರ ಮಗನಂತೆ—ಆ ಭಾಗ್ಯವಿಲ್ಲದ್ದರಿಂದ ಪುಣ್ಯವಂತರ ಅಳಿಯನಾಗಿ—ಇದ್ದನು. ಈತನ ಜತೆಯಲ್ಲಿ ಬಿ. ಎ. ಗೆ ಅನಂತಸ್ವಾಮಿಯ ಭಾವ–ತಂಗಿಯ ಗಂಡ–ನಾರಾಯಣರಾಯನು ಓದಿದ್ದನು. ಅನಂತಸ್ವಾಮಿಯ ಸ್ಥಿತಿಯನ್ನು ನೋಡಿ, ಅವನಿಗೆ ಸಹಾಯಮಾಡೆಂದು ನಾರಾಯಣರಾಯನು ತನ್ನ ಗೆಳೆಯ ಸುಂದರಮೂರ್ತಿಗೆ ಕೆಲವು ತಿಂಗಳ ಹಿಂದೆ ಹೇಳಿದ್ದನು ಅಂದಿನಿಂದ ಮೈಸೂರಿನಲ್ಲಿ ಮೂರ್ತಿ ಸ್ವಾಮಿಯವರ ಗೆಳೆತನ ಆಗಿತ್ತು.

ಒಂದೊಂದು ದಿನ ಸುಂದರಮೂರ್ತಿ ಅನಂತಸ್ವಾಮಿಯ ಜತೆಯಲ್ಲಿ ಹೋಗುತ್ತಿದ್ದನು. ಅನಂತಸ್ವಾಮಿ ವ್ಯಾಯಾಮ ಮಂದಿರದಲ್ಲಿ ವ್ಯಾಯಾಮವನ್ನು ಮುಗಿಸುವ ವರೆಗೂ ಸುಂದರಮೂರ್ತಿ ಮುಂದಿದ್ದ ಸಿಪಾದ್ ಬಾಗಿನಲ್ಲಿ ಕುಳಿತು ಗಾಳಿಸೇವನೆ ಮಾಡುತ್ತಾ, ಆತ ಒಂದೊಡನೆಯೆ ಕಾರಂಜಿ ಕೆರೆಯ ದಡದ ಮೇಲಿನಿಂದ, ಬುಲಿವಾ ರಸ್ತೆಯಲ್ಲಿ ಹೋಗಿ, ಸಂಜೆ ಸುಮಾರು ಏಳೂವರೆ ಗಂಟೆ ವೇಳೆಗೆ ಹಾಸ್ಟೆಲಿಗೆ ಬಂದು, ಊಟಮಾಡಿ, ಬಹು ಜಾಗರೂಕತೆಯಿಂದ ಓದುತ್ತಿದ್ದನು. ಕಾಲೇಜ ಹಾಸ್ಟೆಲಿನಲ್ಲಿ ಇವನ ಜತೆಗೆ ಇವನ ಕ್ಲಾಸಿನವನೇ ಆದ ನರಸಿಂಹಸ್ವಾಮಿಯೂ ಇದ್ದನು.

ನರಸಿಂಹಸ್ವಾಮಿಗೆ ಓದಲು ಅಡಚಣೆಯಾಗುವುದೆಂದು ರಜದ ದಿನ, ಶನಿವಾರ, ಭಾನುವಾರಗಳಲ್ಲಿ ಅನಂತಸ್ವಾಮಿಗೆ ಪಾಠ ಹೇಳಿಕೊಡಲು ಸುಂದರಮೂರ್ತಿ ಅನಂತಸ್ವಾಮಿಯ ಮನೆಗೇ, ಬೆಳಗ್ಗೆ ಹನ್ನೊಂದು ಗಂಟೆಗೆ, ಊಟ

ವಾದ ಮೇಲೆ ಹೋಗಿ ಮಧ್ಯಾಹ್ನ ಮೂರು ಗಂಟೆಗೆ ತಿಂಡಿಯ ವೇಳೆಗೆ ಬರುತ್ತಿದ್ದನು.

ಒಂದು ಶನಿವಾರ ಮಧ್ಯಾಹ್ನ ಸುಂದರಮೂರ್ತಿ ಅನಂತಸ್ವಾಮಿಯ ಮನೆಯಿಂದ ಬಂದವನು ನೆಟ್ಟಗೆ ತಿಂಡಿ ಕಾಫಿಯನ್ನು ಹಾಸ್ಟೆಲಿನಲ್ಲಿ ಮುಗಿಸಿಕೊಂಡು ತನ್ನ ಕೊಟಡಿಗೆ ಬಂದನು.

ನರಸಿಂಹಸ್ವಾಮಿ, 'ಮೂರ್ತಿ! ನಿಮ್ಮಜ್ಜಿ ಬಂದಿದ್ದಳು' ಎಂದನು.

'ಹೋ!' ಎಂದನು ಮೂರ್ತಿ.

'ಹೌದಯ್ಯ ಮೂರ್ತಿ. ನಾನು ಸುಳ್ಳು ಹೇಳುವುದಿಲ್ಲ. ನಿನಗಾಗಿ ಆಕೆ ಅರ್ಧ ಗಂಟೆ ಕಾದಿದ್ದು, ನಿನಗೆ ಮರೆಯದೆ ಕೊಡಬೇಕೆಂದು ಅಕ್ಕರೆಯಿಂದ ಹಣ್ಣನ್ನು ಕೊಟ್ಟು ಹೋಗಿದ್ದಾಳೆ.' ಎಂದು ನರಸಿಂಹಸ್ವಾಮಿ ಮಂಚದ ಕೆಳಗಿನಿಂದ ಒಂದು ದೊಡ್ಡ ಫಿರಂಗಿ ಹಣ್ಣನ್ನು ತೆಗೆದು ಮೂರ್ತಿಯ ಮುಂದಿಟ್ಟನು.

ಆ ಹಣ್ಣು ಬಹು ದೊಡ್ಡದಾಗಿತ್ತು. ಮೂರ್ತಿ ನರಸಿಂಹಸ್ವಾಮಿ ಅಂತಹ ದೊಡ್ಡ ಹಣ್ಣನ್ನು ಅಂದಿನ ವರೆಗೂ ನೋಡಿರಲಿಲ್ಲ. ಅದು ಒಂದು ದೊಡ್ಡ ಹಲಸಿನ ಹಣ್ಣಿನಷ್ಟಿತ್ತು!

'ಯಾರಯ್ಯಾ ಆಕೆ? ನಿನ್ನ ಕಂಡರೆ ಆಕೆಗೆ ಏನು ಅಕ್ಕರೆ!'

'ನನ್ನ ಅಜ್ಜಿ!' ಎಂದು ಮೂರ್ತಿ ನಕ್ಕನು. ನರಸಿಂಹಸ್ವಾಮಿಗೆ ಆಕೆ ಯಾರೆಂದು ತಿಳಿದುಕೊಳ್ಳುವ ಕುತೂಹಲ. ಆಕೆಯ ಮಾತುಗಳು ಆತನನ್ನೂ ಕುತೂಹಲಿಯನ್ನಾಗಿ ಮಾಡಿದ್ದುವು.

'ಹೇಗಿದ್ದಳು ಸ್ವಾಮಿ ಆಕೆ?' ಎಂದು ಮೂರ್ತಿ ಕೇಳಿದನು.

'ಧರ್ಮಾವರದ ಸೀರೆಯುಟ್ಟಿದ್ದಳು. ಕೈಯಲ್ಲಿ ಬಂಗಾರದ ಗೊಲಸುಗಳನ್ನು ಧರಿಸಿದ್ದಳು. ನಡುವಿಗೆ ಬಂಗಾರದ ಡಾಬು. ಕಿವಿಗೆ ದೊಡ್ಡ ಕೆಂಪಿನ ಓಲೆ. ಒಂದು ಮುಕ್ಕರಿಯಲ್ಲಿ ಎರಡು ದೊಡ್ಡ ಫರಂಗಿ ಹಣ್ಣುಗಳನ್ನು ತಂದು ಒಂದನ್ನು ನಿನಗೆ ಇಲ್ಲಿ ಕೊಟ್ಟು, ಇನ್ನೊಂದನ್ನು ಹೊತ್ತುಕೊಂಡು ಹೋದಳು. ಅದನ್ನು ನನಗೆ ಬೆಲೆಗೆ ಕೊಡೆಂದು ಎಷ್ಟೋ ಕೇಳಿಕೊಂಡರೂ ಆಗುವುದಿಲ್ಲವೆಂದು ಹೇಳಿ ಹೊರಟು ಹೋದಳು.'

'ಅದು ಅನಂತಸ್ವಾಮಿ ಮನೆಗಯ್ಯಾ. ನಿನಗೆ ಹೇಗೆ ಅದನ್ನು ಆಕೆ ಕೊಟ್ಟಾಳು!' ಎಂದು ಸುಂದರಮೂರ್ತಿ ನಕ್ಕನು.

'ಯಾರಯ್ಯಾ ಆಕೆ?'

'ವೀಳೆಯದೆಲೆ ಮಾರೋ ಸಂಜಮ್ಮ. ವೀಳೆಯದೆಲೆ ರುಚಿ ನೋಡ ಬೇಕಾದರೆ ಸಂಜಮ್ಮನ ತೋಟದ ಎಲೆ ರುಚಿ ನೋಡಬೇಕಯ್ಯಾ!' ಎಂದು ಆಕೆಯ ಪ್ರಥಮ ಸಂದರ್ಶನವನ್ನು ನರಸಿಂಹಸ್ವಾಮಿಗೆ ವಿವರಿಸಿದನು.

'ಒಳ್ಳೇ ಅಜ್ಞಾನ ಸಂಪಾದಿಸಿದ್ದೀಯಯ್ಯಾ!' ಎಂದು ನರಸಿಂಹ ಸ್ವಾಮಿ ಹಣ್ಣನ್ನು ಹೆಚ್ಚಲು ಪ್ರಾರಂಭಿಸಿದನು.

೩

ಬೀದಿಯಲ್ಲಿ ಹುಡುಗರು ಹತ್ತಿಸುತ್ತಿದ್ದ ಪಟಾಕಿ ಬಾಣ-ಬಿರುಸು ಗಳಿಂದ ಮುಂದೆ ಬರುವ ದೀವಳಿಗೆಯು ಸೂಚಿತವಾಗುತ್ತಿತ್ತು. ಅನಂತ ಸ್ವಾಮಿ, ಸುಂದರಮೂರ್ತಿ ಇಬ್ಬರೂ ಮಾರ್ಕೆಟ್ಟಿನೊಳಕ್ಕೆ ಹೋದರು. ಆಗ ಏಳೂವರೆ ಗಂಟೆ ಹೊಡೆಯಿತು. ಸುಮ್ಮನೆ ಮಾರ್ಕೆಟ್ಟಿನಲ್ಲಿ ಕಾಯಕೂಡ ದೆಂದು ಅನಂತಸ್ವಾಮಿ ಸುಂದರಮೂರ್ತಿಯನ್ನು, ತನ್ನೊಡನೆ ಬಂದ ದಿನ ಗಳಲ್ಲಿ, ದೂರ ಗಾಳಿಸಂಚಾರಕ್ಕೆ ಕರೆದುಕೊಂಡು ಹೋಗಿ ಏಳೂವರೆ ಗಂಟೆಯ ವೇಳೆಗೆ ಮಾರ್ಕೆಟ್ಟಿಗೆ ಬರುತ್ತಿದ್ದನು. ಆ ದಿನಗಳಲ್ಲಿ ಸುಂದರಮೂರ್ತಿಗೆ ಹಾಸ್ಟೆಲಿನಲ್ಲಿ ಎರಡನೆಯ ಪಂಕ್ತಿಯ ಆರಿದ ಊಟವೇ.

ಸಂಜಮ್ಮ ವೀಳೆಯದೆಲೆ ಮಾರುತ್ತ ಕುಳಿತಿದ್ದಳು. ಅನಂತಸ್ವಾಮಿಯನ್ನು ನೋಡಿದೊಡನೆಯೇ ಒಂದು ಸಣ್ಣ ಕಟ್ಟು ವೀಳೆಯದೆಲೆಯನ್ನು ಅವನಿಗೆ ಕೊಟ್ಟು, ಅವನು ಕೊಟ್ಟ ಕಾಲಾಣೆಯನ್ನು ತೆಗೆದುಕೊಂಡಳು. ಸುಂದರ ಮೂರ್ತಿ ಇದನ್ನು ನೋಡಿ ನಸುನಕ್ಕು, ತನ್ನ ಜೇಬಿಗೆ ಕೈಹಾಕಿದನು. ಒಳ ಜೇಬಿನಲ್ಲಿ ಬರಿಯ ಎಂಟಾಣೆ ಮಾತ್ರ ಇದ್ದಿತು. ಹಣದ ಚೀಲವನ್ನು ತನ್ನ ಕೊಟಡಿಯಲ್ಲಿನ ಪೆಟ್ಟಿಗೆಯಲ್ಲಿ ಇಟ್ಟು ಎಂಟಾಣೆಯನ್ನು ಮಾತ್ರ ಜೇಬಿ ನಲ್ಲಿ ಹಾಕಿಕೊಂಡು ಬಂದಿದ್ದನು. ಆ ಎಂಟಾಣೆಯನ್ನು ಸಂಜಮ್ಮನಿಗೆ

ಕೊಟ್ಟು, ' ನಂಜಮ್ಮ, ಈ ರಾತ್ರಿ ರೈಲಿನಲ್ಲಿ ಬೆಂಗಳೂರಿಗೆ ಹೋಗಬೇಕು. ಒಳ್ಳೆ ವೀಳೆಯದೆಲೆ ಕಟ್ಟಿಕೊಡು ' ಎಂದನು.

' ಬರಿ ವೀಳೆಯದೆಲೆಯೇ ಸಾಕೇ ಬುದ್ಧಿ ? ಹೂವು ಬ್ಯಾಡವಾ ? ಈರನಗೆರೆ ಬದನೆಕಾಯಿ ಬ್ಯಾಡವಾ ? '

' ಹಣ ತಂದಿಲ್ಲ, ನಂಜಮ್ಮ ಅವಕ್ಕೆಲ್ಲಾ. '

' ನಾ ತಂದು ಕೊಡುತೀನಿ ಬುದ್ಧಿ. ನೀವು ಯಾವಾಗಲಾವರೂ ಹಣ ಕೊಡಿ ' ಎಂದು ಹೇಳಿ ತನ್ನ ವೀಳೆಯದೆಲೆ ಗೂಡೆಗಳ ಪಕ್ಕದಲ್ಲಿ ಇಟ್ಟಿದ್ದ ಎರಡು ಬುಟ್ಟಿಗಳನ್ನು ತೆಗೆದುಕೊಂಡಳು. ಅವುಗಳಲ್ಲಿ ಒಂದು ದೊಡ್ಡದಾಗಿತ್ತು; ಮತ್ತೊಂದು ಚಿಕ್ಕದಾಗಿತ್ತು. ಅವುಗಳನ್ನು ಸುಂದರಮೂರ್ತಿಯ ಮುಂದಿಟ್ಟು, ದೊಡ್ಡ ಬುಟ್ಟಿಯನ್ನು ತೋರಿಸಿ, ' ಇದರಲ್ಲಿ ಬದನೆಕಾಯಿ ವೀಳೆಯದೆಲೆ ಇದೆ ಬುದ್ಧಿ; ಈ ಸಣ್ಣ ಬುಟ್ಟೀಲಿ ಹೂವಿದೆ. ನನ್ನ ಹೆಸರೇಳಿ ಅಮ್ಮ ಅವರಿಗೆ ಕೊಡಿ ' ಎಂದು ನಸುನಗುತ್ತ ನಂಜಮ್ಮ ಹೇಳಿದಳು.

ಸುಂದರಮೂರ್ತಿಯು ಆಶ್ಚರ್ಯದಿಂದ ' ಇದೇನು ಸಿದ್ಧವಾಗಿಟ್ಟಿದ್ದೀಯಲ್ಲಾ ಎಲ್ಲನೂ, ನಂಜಮ್ಮ ! ' ಎಂದನು.

' ನಿನ್ನೆನೇ ಅನಂತಸ್ವಾಮಿಯವರು ಹೇಳಿದ್ದರು, ನೀವು ಈ ರಾತ್ರಿ ರೈಲಿನಲ್ಲಿ ಬೆಂಗಳೂರಿಗೆ ಹೋಗುತ್ತೀರೆಂದು. ಅದಕ್ಕೇ ಸಿದ್ಧಪಡಿಸಿದ್ದೆ. '

' ಇದಕ್ಕೆ ಇನ್ನೆಷ್ಟು ಹಣ ಕೊಡಬೇಕು, ನಂಜಮ್ಮ ? '

' ಬೆಂಗಳೂರಿನಲ್ಲಿ ಕೇಳಿ ಬನ್ನಿ ಬುದ್ಧಿ. ಆಮೇಲೆ ಏನು ಮನಸ್ಸು ಬರುತ್ತೊ ಅದು ಕೊಡಿ. '

' ನಿನಗೆ ನಷ್ಟವಾಗಕೂಡದು, ನಂಜಮ್ಮ. '

' ನಷ್ಟ ಏನು ಬುದ್ಧಿ. ನೀವು ಕೊಡೋ ಹಣ ಎಲ್ಲಾ ಲಾಭನೇ ! ಇವುಗಳಲ್ಲಿ ಬದನೆಕಾಯಿ ಒಂದಕ್ಕೆ ಹಣ ಕೊಟ್ಟಿದ್ದೀನಿ. ಆ ಹಣ ನೀವು ಕೊಟ್ಟುಬಿಟ್ಟಿದ್ದೀರಿ. ಮಿಕ್ಕವೆಲ್ಲಾ ನನ್ನ ತೋಟದವು. ಹೂ ನನ್ನ ಸೋದರ ಸೊಸೆ ಕಟ್ಟಿದ್ದು. '

' ಹಾಗೆಯೇ ಆಗಲಿ. ನಾನು ಬೆಂಗಳೂರಿನಿಂದ ಬಂದ ಮೇಲೆಯೇ ಬೆಲೆ ಹೇಳು, ಅದನ್ನು ಕೊಡುತ್ತೇನೆ ' ಎಂದು ಸುಂದರಮೂರ್ತಿ ಹೇಳಿ, ಹೊರಗೆ

ಹೋಗಿ ಟಾಂಗಾದವನನ್ನು ಕರೆದುಕೊಂಡು ಬಂದು ಅವನ ಕೈಯಲ್ಲಿ ಬುಟ್ಟಿಗಳನ್ನು ಕೊಟ್ಟು, ಅಷ್ಟು ಹೊತ್ತಿನ ವರೆಗೂ ಮೂಕನಾಗಿ ಸುಮ್ಮನೆ ನಿಂತಿದ್ದ ಸಾಮಿಗೆ, ' ಒಳ್ಳೆ ಉಪಾಯಗಾರ ಅನಂತು !' ಎಂದು ನಂಜಮ್ಮನ ಕಡೆ ನೋಡುತ್ತ ಹೇಳಿದನು.

ಆಗ ನಂಜಮ್ಮ ' ಸಣ್ಣ ಬುಟ್ಟೀನ ಅಪ್ಪಾ ಅವರ ಎದುರಿಗೆ ಮಾತ್ರ ತೆಗೆಯಬೇಕು. ಅದು ನನ್ನ ಪ್ರಾರ್ಥನೆ ' ಎಂದಳು.

' ಆಗಲಿ, ನಂಜಮ್ಮ ! ' ಎಂದು ಸುಂದರಮೂರ್ತಿ ಹೇಳಿದನು.

ಮಾರನೆಯ ದಿನವೇ ನೀರು ತುಂಬುವ ಹಬ್ಬವಾದುದರಿಂದ ಬೇಗ ಹಾಸ್ಟೆಲಿಗೆ ಹೋಗಿ, ಹಾಸಿಗೆ ಪೆಟ್ಟಿಗೆ ಸಿದ್ಧಪಡಿಸಿ ಬೆಂಗಳೂರಿನ ರೈಲಿಗೆ ಹೋಗಲು ಅದೇ ಟಾಂಗಾವನ್ನು ಮೂರ್ತಿ ಗೊತ್ತುಪಡಿಸಿದ್ದನು.

ಅನಂತಸಾಮಿ ಸುಂದರಮೂರ್ತಿ ಇಬ್ಬರೂ ಟಾಂಗಾದಲ್ಲಿ ಕುಳಿತರು. ಟಾಂಗಾ ಬೇಗ ಬೇಗ ಕಾಲೇಜ ಹಾಸ್ಟೆಲಿನ ಕಡೆ ಹೊರಟಿತು.

೪

ತನ್ನ ಹೊತ್ತಿಗೆ ಸರಿಯಾಗಿ ಬೆಳಗ್ಗೆ ಆರು ಗಂಟೆಗೆ ಮೈಸೂರ ರೈಲು ಬೆಂಗಳೂರ ಸ್ಟೇಶನ್ನಿಗೆ ಬಂದಿತು. ಆಗ ಸೂರ್ಯನು ಉದಯಿಸುವ ಚಿಹ್ನೆ ಪೂರ್ವದಿಕ್ಕಿನಲ್ಲಿ ಕಂಡುಬರುತ್ತಿತ್ತು. ಆ ಮೊಬ್ಬಿನ ಬೆಳಕು ಸ್ಟೇಷನ್ನಿನಲ್ಲಿ ಉರಿಯುತ್ತಿದ್ದ ಎಲೆಕ್ಟ್ರಿಕ್ ದೀಪಗಳನ್ನು ಮಂಕಾಗಿ ಮಾಡುತ್ತಿತ್ತು.

ಬರುವವರನ್ನು ಇದಿರು ನೋಡಿಕೊಂಡಿರುವವರು ಪ್ಲಾಟ್‌ಫಾರಂನ ಮೇಲೆ ಉತ್ಸುಕತೆ ಮತ್ತು ಆತುರಗಳಿಂದ ನಿಂತಿದ್ದರು. ರೈಲಿನ ಕಿಟಕಿಯಿಂದಲೇ ತನಗಾಗಿ ಕಾದಿದ್ದ ಪ್ರೇಯಸಿಯನ್ನು ಗುರ್ತಿಸಿದ ಸುಂದರಮೂರ್ತಿ. ರೈಲು ನಿಂತೊಡನೆಯೇ ತಾನಿದ್ದ ಇಂಟರ್ ಕ್ಲಾಸ್ ಕಂಪಾರ್ಟ ಮೆಂಟಿನಿಂದ ಇಳಿದು ಬಂದು, ಆ ಕಂಪಾರ್ಟಮೆಂಟಿನ ಬಳಿಗೆ ಆಳಿನೊಡನೆ ಬರುತ್ತಿದ್ದ ನಳಿನಿಯನ್ನು ಮುಗುಳುನಗೆಯಿಂದ ಸ್ವಾಗತಿಸಿದನು.

ನಳಿನಿ ಅಂದು ಮೂರ್ತಿಯ ಮೆಚ್ಚಿನ ಉಡಿಗೆ-ತೊಡಿಗೆಯಿಂದಿದ್ದಳು. ಕನಕಾಂಬರದ ಪೀತಾಂಬರವನ್ನುಟ್ಟಿದ್ದಳು. ಅದೇ ಬಣ್ಣದ ಜಾಕೆಟ್ಟಿನ ಉಬ್ಬಿದ ತೋಳುಗಳು ಕಿವಿಯ ಓಲೆಗಳಿಂದ ಆಂದೋಳಿಸುತ್ತಿದ್ದ ವಜ್ರದ ಲೋಲಾಕುಗಳನ್ನು ಸೋಕುತ್ತಿದ್ದುವು ಕಾಲಿನಲ್ಲಿ ಜರಿಯ ಪಟ್ಟಿಗಳನ್ನುಳ್ಳ ಚಪ್ಪಲಿಗಳನ್ನು ಧರಿಸಿದ್ದಳು. ಅರ್ಧ ಹೆಣೆದು ಕನಕಾಂಬರದ ಬಣ್ಣದ ರಿಬ್ಬನಿನಿಂದ ಬಿಗಿಯಲ್ಪಟ್ಟಿದ್ದ ಜಡೆಯ ಮಿಕ್ಕರ್ಧ ತುರುಬು ಗಾಳಿಯಲ್ಲಿ ಅಲೆಯಲೆಯಾಗಿ ಚಲಿಸುತ್ತಿತ್ತು. ತುರುಬನ್ನು ಕನಕಾಂಬರ ಹೂವಿನ ದಂಡೆಯಿಂದಲೆ ಸಿಂಗರಿಸಿದ್ದಳು. ಅವಳ ತೆಳ್ಳನೆಯ ಎತ್ತರವಾದ ಆಕೃತಿಗೂ ಈ ಉಡಿಗೆಗೂ ಚೆನ್ನಾಗಿ ಒಪ್ಪುತ್ತಿತ್ತು.

ಆಳು ಗಾಡಿಯೊಳಕ್ಕೆ ಹೋಗಿ ಹಾಸಿಗೆ ಟ್ರಂಕು ಮತ್ತು ಎರಡು ಬುಟ್ಟಿಗಳನ್ನು ಪ್ಲಾಟ್‌ಫಾರಮಿನ ಮೇಲೆ ತಂದಿಟ್ಟನು. 'ಇನೇನು ಈ ಬುಟ್ಟಿಗಳಲ್ಲಿ?' ಎಂದು ನಳಿನಿ ಕೊಂಕಿನಿಂದ ನಸುನಗುತ್ತ ಕೇಳಿದಳು.

'ಮೈಸೂರಿನಿಂದ ತರಬೇಕಾದ ವಸ್ತುಗಳು.'

'ಓ!' ಎಂದು ಹೇಳಿ, ಆಳಿಗೆ ಟ್ರಂಕು ಹಾಸಿಗೆಗಳನ್ನು ಮೊದಲು ಹೊರಗಿದ್ದ ತಮ್ಮ ಕಾರಿನಲ್ಲಿಟ್ಟು ಬಂದು, ಬುಟ್ಟಿಗಳನ್ನು ತೆಗೆದುಕೊಂಡು ಹೋಗಿ ಆಮೇಲೆ ಇಡುವಂತೆ ಹೇಳಿದಳು. ಆಳು ಬುಟ್ಟಿಗಳನ್ನು ಎತ್ತಿ ಕೊಂಡು ಹೋಗುವ ವರೆಗೂ ಅವರಿಬ್ಬರೂ ಅಲ್ಲಿಯೇ ನಿಂತಿದ್ದು, ಬುಟ್ಟಿಯನ್ನು ಎತ್ತಿಕೊಂಡು ಹೋದಾಗ ಆಳಿನೊಡನೆ ಅವರೂ ಹೊರಟು ಕಾರಿನಲ್ಲಿ ಕುಳಿತರು.

ಕಾರು 'ನಳಿನಿ ನಿವಾಸ' ದ ಮುಂದೆ ನಿಂತಿತು. ತಮ್ಮ ಅಳಿಯನನ್ನು ರುಕ್ಮಿಣಿಯಮ್ಮನವರು ಗೇಟಿನ ಬಳಿ ಇದ್ದ ಹೂದೋಟದಿಂದಲೆ ನಸುನಗೆಯಿಂದ ಸ್ವಾಗತಿಸಿದರು. ಅವರೂ ಕಾರಿನಿಂದಿಳಿದ ಅಳಿಯ ಮಗಳೊಡನೆ ಮನೆಯೊಳಕ್ಕೆ ಬಂದರು.

ಆಳು ಹಾಸಿಗೆ, ಟ್ರಂಕು, ಬುಟ್ಟಿಗಳನ್ನು ಮನೆಯ ಮುಂದಿನ ಕೊಟಡಿಯಲ್ಲಿಟ್ಟನು. ದೊಡ್ಡ ಬುಟ್ಟಿಯನ್ನು ತಂದು ಬಿಚ್ಚುವಂತೆ ಮೂರ್ತಿ ಆಳಿಗೆ ಹೇಳಿದನು. ಆಳು ಅದನ್ನು ಅಂಗಳದಲ್ಲಿಟ್ಟು ಅದಕ್ಕೆ ಕಟ್ಟಿದ್ದ ದಾರವನ್ನು

ಬಿಚ್ಚಿ, ಅದರಲ್ಲಿದ್ದ, ಅಡಿಕೆಪಟ್ಟಿಯಿಂದ ಸುತ್ತಲ್ಪಟ್ಟಿದ್ದ ವೀಳೆಯದೆಲೆಯ ಕಟ್ಟನ್ನು ತೆಗೆದು ಕೆಳಗಿಟ್ಟು, ಬದನೆಕಾಯನ್ನು ಕೆಳಗೆ ಸುರಿದನು

'ಬದನೆಕಾಯಿ ಎಳೆಯದಾಗಿ ಬಹಳ ಚೆನ್ನಾಗಿದೆ!' ಎಂದು ರುಕ್ಮಿಣಿ ಯಮ್ಮನವರು ಹೇಳಿ, ಅಡಿಗೆಯವನನ್ನು ಕರೆದು, 'ವಾಂಗೀಬಾತು ಮಾಡು' ಎಂದರು. ನಳಿನಿ ಅಡಿಕೆ ಪಟ್ಟಿಯ ಕಟ್ಟನ್ನು ಬಿಚ್ಚಿ ತಾಯಿಯ ಕೈಗೆ ಅದರ ಲ್ಲಿದ್ದ ನಾಲ್ಕು ಮೈಸೂರು ಕಟ್ಟು ಮೈಸೂರು-ವೀಳೆಯದೆಲೆಯನ್ನು ಕೊಟ್ಟಳು. ಆಕೆ ನಿಂತಿದ್ದ ಆಳಿಗೆ 'ಹೀಗಿರಬೇಕೊ ನೀನು ಮಾರ್ಕೆಟ್ಟಿನಿಂದ ತರೋ ವಿಳೆದೆಲೆ' ಎಂದರು.

ಈ ಮಾತನ್ನು ಕೇಳಿ ಮೂರ್ತಿ ನಳಿನಿಯ ಕಡೆ ಮುಗುಳುನಗೆಯ ಓರೆಗಣ್ಣಿನ ನೋಟವನ್ನು ಬೀರಿದನು. ಆಕೆ 'ಪರವಾ ಇಲ್ಲ. ವೀಳೆದೆಲೆ, ಬದನೆ ಕಾಯಿ ಆರಿಸುವುದೂ ಕಲಿತಿದ್ದೀರಿ!' ಎಂದು ಇಸಿಯಸಿಗೆ ಹೇಳಿದಳು.

'ಎರಡೂ ಬಹಳ ಚೆನ್ನಾಗಿವೆ ಕಾಣೆ!' ಎಂದು ರುಕ್ಮಿಣಿಯಮ್ಮನವರು ಮಗಳಿಗೆ ಹೇಳಿ, 'ಬೇಗ ಮುಖ ತೊಳೆದುಕೋ ಏಳಪ್ಪ' ಎಂದು ಮೂರ್ತಿಗೆ ಹೇಳಿ, 'ನಳಿನಿ! ಕಾಫಿ ತಿಂಡಿ ತೆಗೆದುಕೊಂಡು ಹೋಗಿ ಮೂರ್ತಿಗೆ ಕೊಡೆ' ಎಂದರು.

'ಆಗಲಿ ಅಮ್ಮ' ಎಂದು ನಳಿನಿ ತಿಂಡಿ ಕಾಫಿ ತೆಗೆದುಕೊಂಡು ಹೋಗಲು ಅಡಿಗೆಮನೆಯೊಳಕ್ಕೆ ಹೋದಳು.

ಮೂರ್ತಿ ತನ್ನ ಬಟ್ಟೆ ಬದಲಾಯಿಸಿ ಮುಖ ತೊಳೆದುಕೊಳ್ಳಲು ಹೋದನು.

ನಳಿನಿ ಒಂದು ದೊಡ್ಡ ಬೆಳ್ಳಿಯ ತಟ್ಟೆಯಲ್ಲಿ ಕಾಫಿಯ ಲೋಟಾವನ್ನೂ ನೀರಿನ ಲೋಟಾವನ್ನೂ, ತಿಂಡಿಯಿದ್ದ ತಟ್ಟೆಗಳನ್ನೂ ಇಟ್ಟುಕೊಂಡು ಮೂರ್ತಿಯ ಕೊಟಡಿಗೆ ಬಂದು, ಆ ದೊಡ್ಡ ತಟ್ಟೆಯನ್ನು ಮೇಜಿನ ಮೇಲಿಟ್ಟು, ಕುರ್ಚಿಯ ಮೇಲೆ ಕುಳಿತುಕೊಂಡು, ಮುಂದಿದ್ದ ದೊಡ್ಡ ಕನ್ನಡಿ ಯಲ್ಲಿ ತನ್ನ ರೂಪವನ್ನು ತಾನೇ ನೋಡಿಕೊಂಡು, ಮೂರ್ತಿಯ ಟ್ರಂಕು, ಹಾಸಿಗೆ, ಬುಟ್ಟಿಯ ಕಡೆ ನೋಡಿದಳು. ಮುಖ ತೊಳೆದುಕೊಳ್ಳಲು ಹೋಗಿದ್ದ ಮೂರ್ತಿ ಇನ್ನೂ ಬರಲಿಲ್ಲ. ನಳಿನಿ ಬುಟ್ಟಿಯನ್ನು ತೆಗೆದುಕೊಂಡು

ಅದನ್ನು ಮೇಜಿನ ಮೇಲಿಟ್ಟು, ಅದರಲ್ಲಿ ಏನಿದೆಯೋ ಎಂದು ಮೂಸಿ ನೋಡಿದಳು; ಹೂವಿನ ಸುವಾಸನೆಯನ್ನು ಆಘ್ರಾಣಿಸಿದಳು. ಆಗ ಕೊಟಡಿಯೊಳಕ್ಕೆ ಬಂದ ಮೂರ್ತಿ ' ಏನು ಜಪ್ತಿ ಮಾಡುತ್ತಿದ್ದೀ ? ' ಎಂದು ನಳಿನಿಯನ್ನು ಕೇಳಿದನು.

' ಹೂ ! ' ಎಂದು ನಸುನಗೆಯಿಂದ ನಳಿನಿ ಬಳುಕಿ ನುಡಿದಳು.

' ಹೂ. . ' ಎಂದು ಮೂರ್ತಿ, ಆವಳು ಕೈಯಿಟ್ಟಿದ್ದ ಬುಟ್ಟಿಗೆ ಕೈಹಾಕಿ, ಅದಕ್ಕೆ ಕಟ್ಟಿದ್ದ ದಾರವನ್ನು ಬಿಚ್ಚಲು ಪ್ರಾರಂಭಿಸಿದನು.

' ಇದು ಯಾರೋ ನಿಮ್ಮ ಸ್ನೇಹಿತರಿಗೆ ವೀಳೆಯದೆಲೆ ಬಡಿಸೆಕಾಯಿ ಎಂದುಕೊಂಡಿದ್ದೆ ! ' ಎಂದು ನಳಿನಿ ಗಂಡನಿಗೆ ಹೇಳಿದಳು.

' ಅದಕ್ಕೇ ನಾ ಅಮ್ಮನ ಹತ್ತಿರ ಕೇಳಲಿಲ್ಲ ? '

' ಹುಂ ' ಎಂದು ಆಕೆ ತಲೆಯಲ್ಲಾಡಿಸಿ, ' ಹಾಗೆ ತಿಳಿದಿದ್ದರೆ ಅಮ್ಮನ ಎದುರಿಗೇ ಇದನ್ನು ತೆಗೆಸುತ್ತಿದ್ದೆ. ಅಮ್ಮ ಇದನ್ನೂ ನೋಡಿ ಮೆಚ್ಚುತ್ತಿದ್ದರು ' ಎಂದಳು

' ಆಮೇಲೆ ತೋರಿಸು ಅಮ್ಮನಿಗೆ. '

' ಇನ್ನು ಮಾಡುವುದೇ ಹಾಗೆ ' ಎಂದು ನಳಿನಿ ಹೇಳಿದಳು.

ಮೂರ್ತಿ ಬುಟ್ಟಿಯ ಮುಚ್ಚಳವನ್ನು ತೆಗೆದು, ಅದರಲ್ಲಿ ಮೇಲುಗಡೆಯಿದ್ದ ಹೂವಿನ ದಂಡೆಯನ್ನು ಮೇಲಕ್ಕೆತ್ತಿದನು.

' ಸುಗಂಧರಾಜ, ಪಚ್ಚೆತೆನೆ, ಗುಲಾಬಿ, ಮರುಗ ಮತ್ತು ಮಲ್ಲಿಗೆಗಳಿಂದ ಕ್ರಮವಾಗಿ ದಂಡೆ ಕಟ್ಟಲ್ಪಟ್ಟಿತ್ತು. ಅದು ಉದ್ದದಲ್ಲಿ ಸುಮಾರು ಅರ್ಧ ಅಡಿಯಷ್ಟಿದ್ದಿತು.

' ಬಹಳ ಚೆನ್ನಾಗಿದೆ ! ಎಷ್ಟು ಸುವಾಸನೆಯಾಗಿದೆ ! ' ಎಂದು ನಳಿನಿ ಹೇಳಿದಳು.

ಮೂರ್ತಿ ಅದನ್ನು ಅವಳ ತುರುಬಿಗೆ ಮುಡಿಸಿದನು. ತುರುಬಿನಲ್ಲಿದ್ದ ಕನಕಾಂಬರದ ಹೂವಿನ ದಂಡೆಯ ಮೇಲಿದ್ದ ಈ ದಂಡೆ ಸೊಗಸಾದ ಚೌಕಟ್ಟಿನಿಂದ ಕೂಡಿದ ಸುಂದರವಾದ ಚಿತ್ರದಂತಿತ್ತು !

' ಎಂದೂ ಏನನ್ನೂ ತರದವರು ಈ ಸಲ ಎಲ್ಲಾ ಚೆನ್ನಾಗಿರೋವನ್ನೇ ತಂದುಬಿಟ್ಟಿದ್ದೀರಿ ? ' ಎಂದು ಬಳುಕಿ ನಳಿನಿ ನುಡಿದಳು.

ಮೂರ್ತಿ, ಬುಟ್ಟಿಯಲ್ಲಿದ್ದ ದಂಡೆಯಂತೆಯೇ ಕಟ್ಟಿದ್ದ ಹಾರವನ್ನು ತೆಗೆದುಕೊಂಡು ನಳಿನಿಯ ಕೊರಳಿಗೆ ಹಾಕಿ, ಅವಳ ಕತ್ತಿನ ಮೇಲೆ ಕೈ ಹಾಕಿಕೊಂಡು, ತನ್ನ ಮತ್ತು ತನ್ನಿನಿಯಳ ಪ್ರತಿಬಿಂಬಗಳನ್ನು ಕನ್ನಡಿಯಲ್ಲಿ ನೋಡುತ್ತಾ, ಇನಿಯಳಿಗೆ ಪ್ರೇಮ-ಕಾಣಿಕೆಯನ್ನಿತ್ತು, 'ಎಂಕ್ಕ ದಂಡೆ ಗಳನ್ನು ಅಮ್ಮನಿಗೆ ಕೊಡು, ನಳಿನಿ!' ಎಂದನು.

'ಇಷ್ಟು ದಿನವೂ ಎಲ್ಲಿ ಹೋಗಿತ್ತು ಈ ರಸಿಕತನ?' ಎಂದು ನಳಿನಿ ಕಡೆಗಣ್ಣಿನ ಕಟಾಕ್ಷವನ್ನು ಇನಿಯನ ಮೇಲೆ ಬೀರುತ್ತಾ ಹೇಳಿ, 'ಆರಿ ಹೋಗುತ್ತೆ—ಕಾಫಿ ತಿಂಡಿ ತೆಗೆದುಕೊಳ್ಳಿ' ಎಂದಳು.

'ಅಂತೂ ಎಲ್ಲಾ ಚೆನ್ನಾಗಿವೆ ತಾನೇ?' ಎಂದು ಮೂರ್ತಿ ತಟ್ಟೆಯ ಲ್ಲಿದ್ದ ಉಪ್ಪಿಟ್ಟನ್ನು ತಿನ್ನುತ್ತಾ ಕೇಳಿ, 'ನೀನೂ ಸ್ವಲ್ಪ ಕೈ ಹಾಕು. ಸಹ-ತಟ್ಟೆಯ ಫಲಹಾರವಾಗಲಿ' ಎಂದನು.

'ಈ ಸಲ ತಂದಿರುವುವೆಲ್ಲಾ ಬಹಳ ಚೆನ್ನಾಗಿವೆ!'

'ಹಾಗಾದರೆ ಆ ಕೀರ್ತಿಯೆಲ್ಲಾ ಸಂಜಮ್ಮನಿಗೆ ಸೇರಿದ್ದು, ನಳಿನಿ!'

'ಸಂಜಮ್ಮ! ಅಂ....!'

ಮೂರ್ತಿ ನಳಿನಿಯ ಕೆನ್ನೆಯ ಮೇಲೆ ಮೆಲ್ಲನೊಂದು ಪ್ರೇಮದ ಏಟನ್ನು ಕೊಟ್ಟು, 'ಏಳೆಡೆಲೆ ಮಾರೋ ಮುದುಕಿ ಕಾಣೆ! ಮೊಮ್ಮಗನ ಹಾಗೆ ನನ್ನ ಆಡಿಸುತ್ತಾಳೆ. ನಾನೂ ನೀನೂ ಅತಿಥಿಗಳಾಗಿ ಅವಳ ತೋಟಕ್ಕೆ ಹೋಗಬೇಕಂತೆ' ಎಂದು ಸಂಜಮ್ಮನ ಪರಿಚಯವನ್ನು ಹೇಳಿದನು.

'ಈ ಸಲ ನಿಮ್ಮ ಕಾನ್ಫೋಕೇಷನ್ನಿಗೆ ಹೋದಾಗ ಹೋಗೋಣ' ಎಂದು ನಳಿನಿ ಹೇಳಿದಳು.

'ಸಂಜಮ್ಮನ ಬಯಕೆಯೂ ಅದೆ.'

'ಅಬ್ಬಾ! ಹಾಗಾದರೆ ಮುದುಕಿ ಬಲು ರಸಿಕೆ!' ಎಂದು ನಗುತ್ತಾ ನಳಿನಿ, ಆತ ಕುಡಿಯುತ್ತಿದ್ದ ಕಾಫಿಯ ಲೋಟವನ್ನು ತನ್ನ ತುಟಿಯ ಹತ್ತಿರ ತಂದಾಗ ತಾನೂ ಅದರಿಂದ ಒಂದು ಗುಟುಕು ಕುಡಿದು ನಸುನಗೆಯಿಂದ ತನ್ನ ಗಂಡನಿಗೆ ಹೇಳಿದಳು. ಮೂರ್ತಿ ನಳಿನಿಯ ಮಾತನ್ನು ಕೇಳಿ ಮುಖ ದಲ್ಲಿ ಮುಗುಳುನಗೆಯನ್ನು ಸೂಸಿದನು.

ಇಂದು ಮೈಸೂರಿನ ಜಗನ್ಮೋಹನ ಬಂಗಲೆಯಲ್ಲಿ ವಿಶ್ವವಿದ್ಯಾನಿಲಯದ ಪದವೀದಾನ ಮಹೋತ್ಸವ. ಅದಕ್ಕಾಗಿಯೇ ಸುಂದರಮೂರ್ತಿ ಪತ್ನೀ ಸಮೇತನಾಗಿ ತನ್ನ ಮಾವನ ಕಾರಿನಲ್ಲಿಯೇ ಮೈಸೂರಿಗೆ ಬಂದು 'ಮಾಡರ್ನ್ ಹಿಂದೂ ಹೋಟಲಿ'ನಲ್ಲಿ ಇಳಿದುಕೊಂಡಿದ್ದನು.

ಸುಂದರಮೂರ್ತಿ ಎಂ. ಎ. ನಲ್ಲಿ ಮೊದಲನೆಯ ತರಗತಿಯಲ್ಲಿ ಮೊದಲನೆಯವನಾಗಿ ತೇರ್ಗಡೆಯಾದುದರಿಂದ ಸುವರ್ಣಪದಕವನ್ನೂ, ಕನ್ನಡ ಪ್ರಬಂಧಸ್ಪರ್ಧೆಯಲ್ಲಿ ಅತ್ಯುತ್ತಮವಾದ ಪ್ರಬಂಧವನ್ನು ಬರೆದಿದ್ದುದರಿಂದ ಪ್ರಥಮ ಬಹುಮಾನವನ್ನೂ ಶ್ರೀಮನ್ ಮಹಾರಾಜರವರ ವರದಹಸ್ತದಿಂದ ಪಡೆದನು.

ಉತ್ಸವವು ಮುಗಿದ ಮೇಲೆ ಅದೇ ಉಡುಪಿನಿಂದ ತನ್ನ ಬಹುಮಾನಗಳೊಡನೆ ತನ್ನಿನಿಯಳ ಸಮೇತ ವರದಾಚಾರ್ಯರ ಸ್ಟೂಡಿಯೋದಲ್ಲಿ ಫೋಟೊ ತೆಗೆಸಿಕೊಂಡನು.

ಮಾರನೆಯ ದಿನ ಸಂಜೆ ನಾಲ್ಕು ಗಂಟೆಯ ವೇಳೆಗೆ ಸುಂದರಮೂರ್ತಿ, ನಳಿನಿ, ಅನಂತಸ್ವಾಮಿ, ಪಾರ್ವತಿ ನಾಲ್ವರೂ ಕಾರಿನಲ್ಲಿ ಕುಳಿತು ನಂಜಮ್ಮನ ತೋಟಕ್ಕೆ ಹೋದರು.

ಅರಮನೆಯ ಗಜಶಾಲೆಯ ಬಳಿಯಲ್ಲಿಯೆ ನಂಜಮ್ಮನ ವೀಳೆಯದೆಲೆ ತೋಟಗಳು. ಅವುಗಳಲ್ಲಿ ಅಡಿಕೆ, ಅಗಸೆ ಮರಗಳಿಗೆ ವೀಳೆಯದೆಲೆಯ ಬಳ್ಳಿಗಳು ಹಬ್ಬಿಸಲ್ಪಟ್ಟಿದ್ದುವು. ಬಳ್ಳಿಯಲ್ಲಿನ ಎಲೆಗಳು, ಮರಗಳಲ್ಲಿನ ಹೂ ಕಾಯಿಗಳು ನೋಡಲು ಬಲು ರಮ್ಯವಾಗಿದ್ದುವು. ತೋಟದ ಅಂಚುಗಳಲ್ಲಿ ಬೇಲಿಯ ಒಳಿಯಲ್ಲಿ ಮಲ್ಲಿಗೆ, ಪಾರಿಜಾತ, ಸುಗಂಧರಾಜ, ಪಚ್ಚೆತೆನೆ, ದವನ, ಮರುಗ ಮೊದಲಾದ ಗಿಡಗಳೂ, ಫಿರಂಗಿ, ಸೀಬೆ, ದಾಳಿಂಬೆ, ಬಾಳೆ ಮೊದಲಾದ ಮರಗಳೂ ಇದ್ದುವು. ಇವೆಲ್ಲಾ ಹೂ, ಕಾಯಿ, ಹಣ್ಣುಗಳಿಂದ ತುಂಬಿ ತುಳುಕಾಡುತ್ತ ಭೂದೇವಿಗೆ ಮಣಿಯುತ್ತಿದ್ದುವು. ಆ ತೋಟದ ಮುಂಭಾಗದ ಎಡ ಕೊನೆಯಲ್ಲಿ ಮಂಗಳೂರು ಹಂಚಿನ ಸಣ್ಣ ಮನೆಯಿತ್ತು.

ಸಂಜಮ್ಮ ತೋಟದ ಬಾಗಿಲಲ್ಲಿಯೆ ಕಾದಿದ್ದಳು. ಕಾರು ಬಂದಿತು. ಅದರಿಂದ ನಾಲ್ವರೂ ಇಳಿದರು. 'ಬನ್ನಿ ಬುದ್ಧಿಯವರೇ, ಬನ್ನಿ ಪಾರ್ವತಮ್ಮ, ಬನ್ನಿ ತಾಯಿ ' ಎಂದು ಆದರದಿಂದ ಸಂಜಮ್ಮ ನಾಲ್ವರನ್ನೂ ಸ್ವಾಗತಿಸಿದಳು. ನಳಿನಿ ಎವೆಯಿಕ್ಕದೆ ಸಂಜಮ್ಮನ ಉಡಿಗೆ-ತೊಡಿಗೆಗಳನ್ನು ನೋಡಿ ವಿಸ್ಮಯಗೊಂಡಳು.

ಸಂಜಮ್ಮ ಇವರೆಲ್ಲರನ್ನೂ ತೋಟದ ಮನೆಗೆ ಮೊದಲು ಕರೆದುಕೊಂಡು ಹೋದಳು. ಅದು ವಿಸ್ತಾರವಾದ ಒಂದು ಕೊಟಡಿಯಂತಿತ್ತು. ನೆಲಕ್ಕೆ ಜಮಖಾನೆ ಹಾಸಲ್ಪಟ್ಟಿತ್ತು. ಗೋಡೆಗಳಿಗೆ ಮೈಸೂರರಸರ ತೈಲ ಚಿತ್ರಗಳೂ, ಸಂಜಮ್ಮನ ಬಂಧು-ಬಳಗ, ಆತ್ಮೀಯರ ಚಿತ್ರಗಳೂ ಸೇತು ಹಾಕಲ್ಪಟ್ಟಿದ್ದುವು. ಜಮಖಾನೆಯ ಮೇಲೆ ಇದ್ದ ದೊಡ್ಡ ತಟ್ಟೆಯಲ್ಲಿ ಎರಡು ದೊಡ್ಡ ಫಿರಂಗಿ ಹಣ್ಣುಗಳೂ, ಒಂದು ಡಜನ್ ಗೋವಾ ಸೀಬೆ ಹಣ್ಣುಗಳೂ, ನಾಲ್ಕು ದಾಳಿಂಬೆ ಹಣ್ಣುಗಳೂ, ಎರಡು ಚಿಪ್ಪು ರಸಬಾಳೆಯೂ ಇದ್ದುವು. ಅವುಗಳ ಪಕ್ಕದಲ್ಲಿ ಒಂದು ಚಾಕುವೂ ಇದ್ದಿತು.

ನಾಲ್ವರೂ ಸಂಜಮ್ಮನೊಡನೆ ಕೊಟಡಿಯೊಳಕ್ಕೆ ಬಂದೊಡನೆಯೇ, 'ಕುಳಿತುಕೊಳ್ಳಿ ಅಮ್ಮ. ಬುದ್ಧಿಯೋರುಗಳಿಗೆ ಸಂಕೋಚವಿಲ್ಲ. ನೀವು ಎಲ್ಲಾ ಸಂಕೋಚವಿಲ್ಲದೆ ಬಡವಳ ಆತಿಥ್ಯವನ್ನು ತೆಗೆದುಕೊಳ್ಳಬೇಕು ' ಎಂದು ಆಕೆ ವಿನಯದಿಂದ ಹೇಳಿದಳು.

' ಒಳ್ಳೆ ಬಡತನದ ಆತಿಥ್ಯ! ಐಶ್ವರ್ಯವಂತರು ಕೂಡ ಹೀಗೆ ಉದಾರಿಗಳಾಗಿರುವುದಿಲ್ಲ ! ' ಎಂದು ಪಾರ್ವತಿಯು ಕಡೆ ನೋಡಿ ನಳಿನಿ ಹೇಳಿದಳು.

' ಸಂಜಮ್ಮ ! ಇಷ್ಟು ದೊಡ್ಡ ತೋಟವಿರುವವಳು ನೀನು, ಅನಂತ ಸಾವಿರ ಕೊಟ್ಟ ಕಾಣಿಕೆಯನ್ನು ತಕ್ಷಣ ತೆಗೆದುಕೊಳ್ಳುವುದು ನನಗೆ ಬಗೆಹರಿಯಲಿಲ್ಲ ! ' ಎಂದು ಮೂರ್ತಿ ಸಂಜಮ್ಮನ ಔದಾರ್ಯವನ್ನು ನೋಡಿ ಹೇಳಿದನು.

' ಯಾರದೂ ಋಣ ಕೂಡದು ಬುದ್ಧಿ. ಕಾಸು ತೆಗೆದುಕೊಂಡರೆ ಋಣ ಇಲ್ಲ. ನಾನು ಯಾರ ಮನೆಯಲ್ಲಿಯೂ, ಯಾರೂ ನನ್ನ ಮನೆಯಲ್ಲಿಯೂ ಅಲ್ಪಾಯುಗಳಾಗಿ ಸಾಲ ತೀರಿಸಲು ಹುಟ್ಟಕೂಡದು ಬುದ್ಧಿ. ನಾನು ಮೆಚ್ಚಿ ಒಂದು ದಿನ ಏನಾದರೂ ಕೊಟ್ಟರೆ ಅದು ಆದರ ಆಯಿತು.

ಸದಾ ಸುಮ್ಮನೆ ಕೊಡಲು ಮನಸ್ಸು ಬರೋದಿಲ್ಲ. ಮನಸ್ಸಿಲ್ಲದೆ ಕೊಟ್ಟರೆ ಋಣ ಆಯ್ತು ಬುದ್ದಿ. ಅದಕ್ಕೆ ಯಾರು ಎಷ್ಟು ಹಣ ಕೊಟ್ಟರೆ ಅಷ್ಟು ತೆಗೆದುಕೊಂಡು ಎಳೆದೆಲೆ ಕೊಟ್ಟು ಅವರು ತೆಗೆದುಕೊಂಡುದನ್ನೇ ಮರೆತು ಬಿಡುತ್ತೇನೆ. ಅಲ್ಲಿಗೆ ಕೊಟ್ಟಿದ್ದರ ಬೆಲೆ ಒಂದ ಹಾಗಾಯ್ತು, ಋಣ ಇಲ್ಲ.'

ಮೂರ್ತಿ ನಂಜಮ್ಮನ ವೇದಾಂತಕ್ಕೆ ತಲೆದೂಗಿದನು. ಮಿಕ್ಕವರು ನಂಜಮ್ಮನ ಬುದ್ದಿಗೆ ಆಶ್ಚರ್ಯಪಟ್ಟರು.

ಸುಂದರಮೂರ್ತಿ ತನ್ನ ಜೇಬಿನಿಂದ, ತನಗೆ ಬಂದಿದ್ದ 'ಮೆಡಲು' ಬಹು ಮಾನವನ್ನು ತೆಗೆದು ನಂಜಮ್ಮನಿಗೆ ತೋರಿಸಿದನು. ಆಕೆ 'ನಿಮಗೆ ಮೊದಲೇ ಮೆಡ್ಲು ಬರುತ್ತೆ ಎಂದು ಹೇಳಲಿಲ್ವೆ ಬುದ್ದಿ. ಅನಂತಸಾಮಿ ಬುದ್ದಿಯೋರಿಗೂ ಈ ಸಲ ಪ್ಯಾಸಾದ್ದು ಸಂತೋಷ' ಎಂದಳು.

'ಇವರಿಂದ ಈ ಸಲ ಪ್ಯಾಸಾದೆ ನಂಜಮ್ಮ!' ಎಂದು ಸಾಮಿ ಮೂರ್ತಿಗೆ ತನ್ನ ಕೃತಜ್ಞತೆಯನ್ನು ತೋರಿಸುತ್ತಾ ಹೇಳಿದನು.

'ಮಾತಿರಲಿ ಹಣ್ಣು ಹೆಚ್ಚಿ ತಾಯಿ' ಎಂದು ನಂಜಮ್ಮ ಹೇಳಿದಳು.

ನಳಿನಿಯೇ ಹಣ್ಣುಗಳನ್ನು ಹೆಚ್ಚಿ ತಟ್ಟೆಯಲ್ಲಿ ಹಾಕಿದಳು. ನಾಲ್ವರೂ ಒಂದೇ ತಟ್ಟೆಯಲ್ಲಿಯೇ ಫಲಹಾರ ಮಾಡಿದರು. ಅಂದು ನಂಜಮ್ಮನಿಗೆ ಅನಂತ ತೃಪ್ತಿ.

ಫಲಹಾರವಾದ ಮೇಲೆ ನಂಜಮ್ಮ ಇವರನ್ನು ತೋಟದ ಸುತ್ತಲೂ ಕೈಯಲ್ಲಿ ಬುಟ್ಟಿಯೊಂದನ್ನು ಹಿಡಿದುಕೊಂಡು ಕರೆದುಕೊಂಡು ಹೋದಳು. ನಳಿನಿ, ಪಾರ್ವತಿ ತಮಗೆ ಬೇಕಾದ ಹೂಗಳನ್ನೆಲ್ಲಾ ಕಿತ್ತು ನಂಜಮ್ಮನ ಕೈಲಿದ್ದ ಬುಟ್ಟಿಯಲ್ಲಿ ತುಂಬಿದರು.

ತೋಟದ ಮುಂಭಾಗದ ಎಡಗಡೆಯ ಕೊನೆಯಲ್ಲಿ ಆರಡಿ ಚೌಕದ ಪಾತಿಯೊಂದಿತ್ತು. ಅದರಲ್ಲಿ ಗುಲಾಬಿ, ತುಳಸಿ ಬಹು ಚೆನ್ನಾಗಿ ಬೆಳೆದಿದ್ದುವು ಅದರಲ್ಲಿನ ಗಿಡಗಳಲ್ಲಿ ಕೆಂಪು ಮತ್ತು ಬಿಳಿಯ ಗುಲಾಬಿ ಹೂಗಳು ಬಹು ದೊಡ್ಡವಾಗಿದ್ದುವು. ತುಳಸಿಯ ಗಿಡ ಒಂದು ದೊಡ್ಡ ಮರದಂತೆ ಬೆಳೆದಿತ್ತು!

ತರುಣಿಯರಿಬ್ಬರೂ ಆ ಹೂಗಳನ್ನು ಕೀಳಲುದ್ಯುಕ್ತರಾದರು. ಹಿಂದೆ ಇದ್ದ ನಂಜಮ್ಮ ಗಾಬರಿಯಿಂದ, 'ಬೇಡಿ! ಅವ್ಮಾ ಅಲ್ಲಿ ಮಾತ್ರ ಕಾಲಿಟ್ಟು ಅವನ್ನು ಕೀಳಬೇಡಿ!' ಎಂದು ಆತುರದಿಂದ ಇವರ ಹತ್ತಿರ ಬಂದಳು. ಆಗಿನ

ಅವಳ ಮುಖದಲ್ಲಿನ ಭಾವವನ್ನು ನೋಡಿ ತರುಣಿಯರಿಬ್ಬರೂ ಸ್ತಂಭೀಭೂತ ರಾಗಿ ನಿಂತರು.

ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ. ಸುಂದರಮೂರ್ತಿ, ' ಏನು ನಂಜಮ್ಮ ? ' ಎಂದು ಮೌನವನ್ನು ಮುರಿದನು.

' ಅದು ಅವರ ಸಮಾಧಿ. ಆ ಹೂಗಳ ಜೀವನವೂ ಅವರ ಜೀವನ ದಂತೆಯೇ ಇರಬೇಕು ' ಎಂದು ನಂಜಮ್ಮ ಕಣ್ಣೊರಸಿಕೊಂಡಳು.

' ಎಷ್ಟು ದಿನವಾಯಿತು ಅವರು ಕಾಲವಾಗಿ ? ' ಎಂದು ನಳಿನಿ ನಿದಾನವಾಗಿ ಕೇಳಿದಳು.

' ನನ್ನ ಹದಿನೇಳನೆಯ ವಯಸ್ಸಿನಲ್ಲಮ್ಮ ! ಮದುವೆಯಾಗಿ ಸಂಸಾರ ಮಾಡಿದ ವರ್ಷದ ಕೊನೆಯಲ್ಲಿಯೇ, ಈ ಊರಿಗೆ ಬಂದ ಆ ಹಾಳು ಪ್ಲೇಗಿನಲ್ಲಿ ! '

' ಇವೆಲ್ಲಾ ಅವರ ಆಸ್ತಿಯೂ ? ' ಎಂದು ಪಾರ್ವತಿ ಕೇಳಿದಳು.

' ಈ ತೋಟ ಅವರದು. ಅವರು ಮನೆಗೆಲ್ಲಾ ಒಬ್ಬರೇ ಮಕ್ಕಳಾ ಗಿದ್ದರು. ಅವರು ಪ್ರಿತಿಸಿದ ನನ್ನನ್ನು ಮದುವೆಯಾಗಬೇಕೆಂದಿದ್ದಾಗ ಅವರ ತಾಯಿ—ನನ್ನ ಅತ್ತೆಯಾದವಳು—ಬೇಡವೆಂದು ಅಡ್ಡಿ ಒಂದಳು. ಆದರೆ ಪುಣ್ಯಾತ್ಮ ನನ್ನ ಮಾವನ ಹಠದಿಂದ ನಮ್ಮ ಮದುವೆಯಾಯಿತು. ಮದುವೆ ಯಾದ ಮೂರು ತಿಂಗಳಿಗೇ ನಮ್ಮತ್ತೆ ತೀರಿಹೋದಳು. ನನ್ನ ಮಾವ ಮೊನ್ನೆ ಮೊನ್ನೆ ಸಾಯೋವರೆಗೂ, ನನ್ನ, ತಮ್ಮ ಮಗಳಂತೆ ಅಚ್ಚುಮೆಚ್ಚಾಗಿ ನೋಡಿಕೋತಿದ್ದರು. ನನ್ನ ತಂದೆ ತಾಯಿಗೆ ನಾನೊಬ್ಬ ಮಗಳು, ನನ್ನ ಅಣ್ಣನೊಬ್ಬ ಮಗ ಅಷ್ಟೆ. ಇದರ ಪಕ್ಕದಲ್ಲಿರುವ ತೋಟ ನನ್ನ ತೌರು ಮನೆಯ ಹರಿಸಿನದ ಕಾಣಿಕೆ. ಇನ್ನೆರಡು ತೋಟಗಳು ನಾನು ಏಳಿಗೆಲೆ ಮಾರಿ ಕೊಂಡವು. '

' ತೋಟ ಬಹಳ ಚೆನ್ನಾಗಿದೆ, ನಂಜಮ್ಮ !' ಎಂದು ನಳಿನಿ ಹೇಳಿದಳು.

' ನಿಮ್ಮಂಥಾವರು ನೋಡಿ ಸಂತೋಷಪಟ್ಟರೆ, ಸಂತೋಷ ಪಡುವ ನಿಮ್ಮಂಥ ದಂಪತಿಗಳನ್ನು ನೋಡಿ ಸಂತೋಷಪಡುವುದು ನನ್ನ ಭಾಗ್ಯ ತಾಯಿ ! ' ಎಂದು ನಂಜಮ್ಮ ಹೇಳಿದಳು. ಹೇಳುವಲ್ಲಿ ತನ್ನ ಹಿಂದಿನ ಜೀವನ ವನ್ನು ನೆನೆದು ಕಣ್ಣನ್ನೊರಸಿಕೊಂಡಳು.

ಇದನ್ನು ಕೇಳಿ ನಳಿನಿಯ ಹೃದಯ ಕರಗಿತು. ಆಕೆಯ ಕಣ್ಣೀರು ಪಾತಿಯಲ್ಲಿ ಬಿದ್ದಿತು. ನಂಜಮ್ಮ ಅದನ್ನು ನೋಡಿದಳು; ತನ್ನ ನೋಟವನ್ನು ನಳಿನಿ ಮತ್ತು ಮೂರ್ತಿಯ ಕಡೆ ಬೀರಿದಳು. ಅನಂತಸ್ವಾಮಿ ಬೆಪ್ಪಾಗಿ ಇವರ ಕಡೆ ನೋಡಿ ಪಾರ್ವತಿಯ ಕಡೆ ತನ್ನ ದೃಷ್ಟಿಯನ್ನು ಬೀರಿದನು.

ಮೌನವಾಗಿ ಎಲ್ಲರೂ ತೋಟದ ಹೊರಗೆ ಬಂದರು. ಡ್ರೈವರು ಮೋಟಾರಿನ ಬಾಗಿಲನ್ನು ತೆರೆದನು. ನಂಜಮ್ಮ ಹೂ ಬುಟ್ಟಿಯನ್ನು ಕಾರಿನಲ್ಲಿ ಇಟ್ಟಳು. ಜತೆ ದಂಪತಿಗಳೂ ಕಾರಿನಲ್ಲಿ ಕುಳಿತರು.

'ನಂಜಮ್ಮ ! ನಿನ್ನ ಮತ್ತು ನಿನ್ನ ತೋಟ ನೋಡಿ ಬಹಳ ಸಂತೋಷವಾಯಿತು ! ' ಎಂದು ನಳಿನಿ ಹೇಳಿದಳು.

'ನೀವೂ ಬುದ್ಧಿಯೋರೂ ಲಕ್ಷ್ಮೀನಾರಾಯಣರಂತಿದ್ದೀರಮ್ಮಾ ಈ ಮಾತನ್ನೇ ಪಾರ್ವತಮ್ಮ ಅನಂತಸ್ವಾಮಿಯವರಿಗೂ ಹೇಳತಿದ್ದೆ. ಈ ಊರಿಗೆ ಬಂದಾಗಲೆಲ್ಲಾ, ನನ್ನ ಮರೀದೆ ನನ್ನ ತೋಟಕ್ಕೆ ಬರುತ್ತೀರಿ' ಎಂದು ಕೈ ಜೋಡಿಸಿ ನಂಜಮ್ಮ ಹೇಳಿದಳು.

'ಖಂಡಿತ ಬರುತ್ತೇನೆ, ನಂಜಮ್ಮ ' ಎಂದು ನಳಿನಿ ಹೇಳಿದಳು.

'ಮನೆ ಕಡೆ ಬಂದಾಗ ಬುಟ್ಟಿ ತೆಗೆದುಕೊಂಡು ಹೋಗು, ನಂಜಮ್ಮ ಎಂದು ಪಾರ್ವತಿ ಹೇಳಿದಳು.

'ಇರಲಿ ಅದು ಬಿಡು ನನ್ತಾಯಿ ! ' ಎಂದು ನಂಜಮ್ಮ ನುಡಿದಳು.

ಕಾರು ಹೊರಟಿತು.

'ಬಹು ರಸಿಕೆ, ನಂಜಮ್ಮ!' ಎಂದು ನಸುನಗೆಯಿಂದ ಪಾರ್ವತಿಯ ಕಡೆ ನೋಡುತ್ತ ನಳಿನಿ ಹೇಳಿದಳು.

'ಇವರಿಗೆ ಈಗ ತಿಳಿದಿದೆ ಅದು, ಮೂರ್ತಿ ! ' ಎಂದು ಅನಂತಸ್ವಾಮಿ ಹೇಳಿದನು.

'ನೊಂದ ಜೀವ. ಇದೇ ಆಕೆಯ ತೃಪ್ತಿ' ಎಂದು ನಿಟ್ಟುಸಿರನ್ನು ಬಿಟ್ಟು ಸುಂದರಮೂರ್ತಿ ಹೇಳಿದನು. ಮಿಕ್ಕ ಮೂವರೂ ತಮ್ಮ ನಿಟ್ಟುಸಿರನ್ನೂ ಅವನದರೊಡನೆ ಬೆರಸಿದರು.

ಬಹುಶಃ ಅಂದು ನಂಜಮ್ಮನಿಗಾದ ತೃಪ್ತಿ ಅವಳ ಗಂಡನಿಗೂ ಆಗಿರಬೇಕು.

---

# ಬೇಟೆ

೧

'ಇದೇನು ಅಪರೂಪ ದರ್ಶನ ಸರ್ ಬಸವರಾಜ್ !'

'ನಿನ್ನ ಹತ್ತಿರವೇ ಬಂದೆ ಜಯರಾಜ್. ಏನು ನೀನೇ ನನಗೆ 'ನೈಟ್ ಹುಡ್' ಕೊಡುತ್ತಿದ್ದೀಯಲ್ಲಾ ! ನೀನು ಜಮೀನ್‌ದಾರ ದೇವರಾಜನಂತೆ ಪ್ರಯತ್ನಿಸುತ್ತಿದ್ದೀಯೋನೋ. ಅವನಿಗೆ ಅರ್ಧ ಆಯುಸ್ಸು ಕಳೆದ ಮೇಲೆ ಆರು ತಿಂಗಳ ಹಿಂದೆ ಚಕ್ರವರ್ತಿಯವರ ಜನ್ಮೋತ್ಸವದ ಗೌರವಾರ್ಥವಾಗಿ ಆತನ ಮೂವತ್ತುವರ್ಷಗಳ ಪ್ರಯತ್ನದಿಂದ 'ನೈಟ್‌ಹುಡ್' ಬಂದಿತು. ನನ್ನ ಯಾವ ಕಾರ್ಯಕ್ಕಯ್ಯಾ ನೈಟ್‌ಹುಡ್ ಬರುತ್ತೆ ?' ಎಂದು ಡ್ರಾಯಿಂಗ್ ರೂಮಿನ ಬಾಗಿಲ ಬಳಿ ಸ್ವಾಗತಿಸಿದ ಜಯರಾಜನಿಗೆ ಬಸವರಾಜ್ ಹಸ್ತ ಲಾಘವವನ್ನಿತ್ತು ಹೇಳಿದನು.

ಜಯರಾಜ್ ಅತಿಥಿಯನ್ನು ಡ್ರಾಯಿಂಗ್ ರೂಮಿನೊಳಕ್ಕೆ ಕರೆದು ಕೊಂಡು ಹೋಗಿ, ಕಸೂತಿ ಕಲೆಯಿಂದ ಕೂಡಿದ್ದ ಸೋಫಾದ ಮೇಲೆ ಆತ ನೊಡನೆ ಕುಳಿತನು. ಬಸವರಾಜ್ ಡ್ರಾಯಿಂಗ್ ರೂಮನ್ನು ಚೆನ್ನಾಗಿ ದೃಷ್ಟಿಸಿ ನೋಡಿದನು. ಆ ವಿಶಾಲವಾದ ಕೊಟಡಿಯು ಬಹಳ ಸುಂದರವಾಗಿ ಅಲಂಕೃತವಾಗಿತ್ತು. ಅಗಲವಾದ ಕಿಟಕಿಗಳಿಗೆ ಕಸೂತಿ ಕೆಲಸ ಮಾಡಿದ ತಿಳಿಯ ರೇಷ್ಮೆಯ ನೀಲಿಯ ತೆರೆಗಳು ಹಾಕಲ್ಪಟ್ಟಿದ್ದುವು. ಕೊಟಡಿಯ ಗೋಡೆಗಳೆಲ್ಲಾ ಸೊಗಸಾದ ಚಿತ್ರಗಳಿಂದ ಶೋಭಿಸುತ್ತಿದ್ದುವು. ನೆಲವು ರತ್ನಕಂಬಳಿಯಿಂದ ನೆರೆಯುತ್ತಿತ್ತು. ಆ ರತ್ನಕಂಬಳಿಯ ಮೇಲೆ, ಗೋಡೆ ಗಳ ಪಕ್ಕದಲ್ಲಿ ನಾಲ್ಕು ಕಡೆಗೂ, ಕೊಟಡಿಯ ಮುಂದುಗಡೆ ಮತ್ತು ಒಲ

ಗಡೆ ಇರುವ ಬಾಗಿಲುಗಳನ್ನು ಬಿಟ್ಟು ಏಕ್ಕ ಸ್ಥಳದಲ್ಲೆಲ್ಲಾ, ಸಾಲಾಗಿ ಸೋಫಾಗಳು. ನಡುವೆ ಇದ್ದ, ಸೊರಬದ ಕಲಾವಿದರಿಂದ ಪುತ್ಥಳೀಮಯ ವಾಗಿ ಮಾಡಲ್ಪಟ್ಟಿದ್ದ, ಜಂತದ ಮೇಜಿನ ಮೇಲೆ ಇಡಲ್ಪಟ್ಟಿದ್ದ ನೀಲಿಯ ಗಾಜಿನ ಹೂಜಿಯಲ್ಲಿದ್ದ ನೀರಿನಲ್ಲಿ ಎಲೆ ಸಹಿತವಾದ ಗುಲಾಬಿಯ ಹೂಗಳು ಮೆರೆಯುತ್ತಿದ್ದುವು. ಅವುಗಳಲ್ಲಿ ನಾಲ್ಕು ಕೆಂಪವು, ನಾಲ್ಕು ಬಿಳಿಯವು. ಕೊಟಡಿಯನ್ನೂ ಅದರ ಸಿಂಗಾರವನ್ನೂ ನೋಡಿದರೆ ಅದರ ಒಡೆಯರು ರಸಿಕರೆನ್ನುವುದು ವ್ಯಕ್ತವಾಗುತ್ತಿತ್ತು.

ಕೊಟಡಿಯ ಅಲಂಕಾರವನ್ನು ನೋಡಿ ವಿಸ್ಮಿತನಾದ ಬಸವರಾಜ್, 'ಏನಯ್ಯಾ ! ಭಾರತದ ಕಲಾದೇವಿಯನ್ನೇ ಮನೆಯಲ್ಲಿ ತಂದಿಟ್ಟುಕೊಂಡ ಹಾಗಿದೆ. ನಿನ್ನ ಮದುವೆಯಾದ ಮೇಲೆ ಮನೆ ಚೆನ್ನಾಗಾಗಿದೆ. ! ' ಎಂದನು.

' ನಾನು ಬೇಡವೆಂದರೂ ಉಮಾದೇವಿಯ ಚಪಲ ಇವೆಲ್ಲಾ. ಆಕೆ ಮಾಡೋಕೂ ಸರಿಯೆ, ಅಮ್ಮ ಅವಳನ್ನು ಅನ್ನೋಕೂ ಸರಿಯೆ. ಆಕೆ ಚೆನ್ನಾಗಿರುವಂತೆ ಮಾಡುವ, ಎಲ್ಲರೂ ಮೆಚ್ಚುವ ಕೆಲಸಗಳಿಗೆ ನಾನೇಕೆ ಅಡ್ಡಿ ಬರಲಿ ಎಂದು ಸುಮ್ಮನಿದ್ದೇನೆ. '

' ಪರವಾ ಇಲ್ಲವಯ್ಯ ನೀನು ! ಬಿ. ಎ. ಮಾಡಿದ ಜಮೀನ್‌ದಾರರ ಮಗಳನ್ನು ರಾಯಲ್‌ಸ್ಕೂಲಿನ ಬರಿಯ ವಿದ್ಯಾರ್ಥಿಯಾದ ನೀನು ಮದುವೆ ಆದ್ದು ನಿನ್ನ ಅದೃಷ್ಟವೇ. ಈಗ ನೋಡು ನನಗೆ ಅದೇ ಕಷ್ಟಕ್ಕೆ ಬಂದಿದೆ. ಗವರ್ನರವರು ಗುರುವಾರ ನಮ್ಮೂರಿಗೆ ಬರುತ್ತಾರಂತೆ. ಏನು ಮಾಡ ಬೇಕೆಂಬುದೇ ತೋಚದಾಗಿದೆ. ಅದಕ್ಕೇ ನಿನ್ನಲ್ಲಿಗೆ ಬಂದೆ. '

' ಇಲ್ಲಿಗೆ ಇನ್ನೂ ಒಂದು ದಿನ ಮುಂಚೆಯೇ ಅವರು ಬರುತ್ತಾರೆ. ಇನ್ನು ನಾಲ್ಕು ಪೂರ್ಣ ದಿನಗಳು ಮಾತ್ರ ಉಳಿದಿವೆ. ನಾನೇನೂ ಅದನ್ನು ಹಚ್ಚಿಕೊಳ್ಳುವುದೇ ಇಲ್ಲ. ಎಲ್ಲಾ ನೋಡಿಕೊಳ್ಳೋದಕ್ಕೆ ಮ್ಯಾನೇಜರ್ ಶ್ರೀನಿವಾಸರಾಯರು, ರಾಣಿಸಾಹೇಬ ಉಮಾದೇವಿ ಇದ್ದಾರೆ! ' ಎಂದು ನಸುನಗೆಯಿಂದ ಜಯರಾಜ್ ಹೇಳಿದನು.

' ನಿನ್ನ ಊರನ್ನು ನೋಡಿದರೆ ಎಲ್ಲಾ ಸಿದ್ಧವಾದಂತೆಯೇ ಇದೆ. ಪ್ರತಿ ರಸ್ತೆಯೂ ಸೊಗಸಾಗಿ ರಿಪೇರಿಯಾಗಿ ಸಿಮೆಂಟ್ ಕಾಂಕ್ರೀಟ್ ರಸ್ತೆಯ ಹಾಗಿದೆ. ಪ್ರತಿ ಮನೆಗೂ ಸುಣ್ಣ ಬಳಿಸಿದೆ. ನಿನ್ನ ಕೋಟೆ-ಗೋಡೆಯೂ,

ಮುಹಡಿ-ಮನೆಯೂ ಎಲ್ಲಾ ಹೊಸದಾಗಿ ಕಟ್ಟಿಸಿದಂತೆ ಇವೆ! ಆಗಲೇ ಅಲಂಕೃತವಾದ ಚಪ್ಪರವೂ ಕೂಡ ಸಿದ್ಧವಾಗಿದೆಯಂತೆ. ನಿನ್ನ ಊರಿನಲ್ಲಿ ದೀಪಗಳಿಗೇ ಎಲ್ಲಾ ಬೇಗನೆ ಹೋಗುತ್ತಾರೆ, ಜಯರಾಜ್! '

' ಕೋಟೆ-ಗೋಡೆಯನ್ನು ತೆಗೆಸಿಹಾಕಬೇಕೆಂದಿದ್ದೆ. ಆದರೆ ಉಮಾ, ' ಅದು ಇರಲಿ. ಹಿಂದಿನವರ ನೆನಪನ್ನು ತರುತ್ತೆ. ಈಗಿನ ಕಾಲದ ಸಣ್ಣ ಮೊಂಡುಗೋಡೆಗಿಂತ ಇದು ಎಷ್ಟೋ ಸುರಕ್ಷಿತ ' ಎಂದಳು. ಅದಕ್ಕೇ ಅದನ್ನೇ ರಿಪೇರಿ ಮಾಡಿಸಿದೆ '

' ಇದೇನಯ್ಯಾ ಕೋಟೆ-ಗೋಡೆಯ ಪಕ್ಕದಲ್ಲಿ ಸುತ್ತಲೂ ಹಾರ್ಸ್-ಟ್ರ್ಯಾಕ್ ? '

' ನಮ್ಮ ಕುದುರೆ-ಸವಾರಿಗೆ, ಬಸವರಾಜ್ ! ಕುದುರೆಯ ಮೇಲೆ ಕುಳಿತು ಮೂರು ಸುತ್ತು ಹಾಕಿದರೆ, ಮೂರು ಮೈಲಿ ಆಗುತ್ತೆ. ಅದೇ ನಮ್ಮ ಎಕ್ಸರಸೈಜ್ '

' ನಿನಗೆ ಸಿತ್ಯವೂ ಈ ಎಕ್ಸರಸೈಜೂ ಉಂಟೋ ? '

' ಮನಸ್ಸು ಬಂದಾಗ ಕುದುರೆಯ ಮೇಲೆ ಹೋಗುತ್ತೇನೆ. ಸೂರ್ಯ ಹುಟ್ಟುವುದಕ್ಕೆ ಮೊದಲೇ ಉಮಾ ಎಕ್ಸರಸೈಜೆಲ್ಲಾ ಮುಗಿಸಿರುತ್ತಾಳೆ.' ಎಂದು ಜಯರಾಜ್ ಹೇಳಿದನು.

ಅಡಿಗೆಯವನು ಕೊಟಡಿಯೊಳಕ್ಕೆ ಬಂದು, ಒಂದೊಂದು 'ಟೀಪಾಯಿ' ಯನ್ನು ಅವರಿಬ್ಬರ ಮುಂದೆ ಇಟ್ಟು, ಫಲಹಾರದ ತಟ್ಟೆಗಳನ್ನು ತಂದು ಅವು ಗಳ ಮೇಲಿಟ್ಟನು. ಕೇಸರಿಯ ಕುಡಿಯುವ ನೀರೂ, ಕಾಫಿಯ ಡಿಕಾಕ್ಷನ್, ಸಕ್ಕರೆ, ಹಾಲುಗಳನ್ನೊಳಗೊಂಡ ಬೆಳ್ಳಿಯ ಟೀ ಸೆಟ್ಟೂ, ಒಂದು ಓವಲ್-ಟೈನ್, ಒಂದು ಕೋ ಕೋ ಟಿನ್ನುಗಳೂ, ಆ ತಟ್ಟೆಯ ಬಳಿ ಇಡಲ್ಪಟ್ಟಿ ದ್ದುವು.

' ಇದೇನು ವೆಸ್ಟೆಂಡ್ ಹೋಟಲೇನಯ್ಯಾ ! ' ಎಂದು ಬಸವರಾಜು ಆಶ್ಚರ್ಯವನ್ನು ಸೂಚಿಸಿದನು.

' ನೀನು ಮೊದಲ ಸಲ ಮನೆಯ ಅತಿಥಿಯಾಗಿ ಬಂದಿದ್ದೀ. ನಿನ್ನ ಪ್ರೀತಿ ಯಾವ ತಿಂಡಿಯ ಮೇಲಿದೆ ಎನ್ನುವುದು ತಿಳಿದರೆ, ಇನ್ನೊಂದು ಸಲ

ಬಂದಾಗ ಅದು ಮಾತ್ರ ಬರುತ್ತೆ. ಅದನ್ನು ಕಂಡುಹಿಡಿಯಲು ಇವೆಲ್ಲಾ!' ಎಂದು ಜಯರಾಜ್ ನಸುನಗೆಯಿಂದ ಹೇಳಿದನು. ಇಬ್ಬರೂ ತಿಂಡಿಯ ತಟ್ಟೆಗಳಿಗೆ ಕೈಹಾಕಿದರು.

'ಬಹಳ ಚೆನ್ನಾಗಿವೆಯಯ್ಯಾ, ಎಲ್ಲಾ!' ಎಂದು ಗೆಳೆಯನನ್ನು ಬಸವರಾಜ್ ಹೊಗಳಿದನು. ಆಗ ಮುಂಬಾಗಿಲು ತಳ್ಳಲ್ಪಟ್ಟಿತು. ಬಂದ ಮುದುಕಿಗೆ ಬಸವರಾಜ್ ನಮಸ್ಕಾರ ಮಾಡಿ 'ಸೌಖ್ಯವೇ ಅಜ್ಜಿ?' ಎಂದು ಕೇಳಿದನು.

'ಏನೋ ಇಷ್ಟು ಮಾತ್ರನಪ್ಪಾ. ಮನೆಯಲ್ಲಿ ಪಾರ್ವತಮ್ಮ ಸುಶೀಲ ಎಲ್ಲಾ ಸೌಖ್ಯವೇ?'

'ಊ ಅಜ್ಜಿ'

'ಏನಪ್ಪಾ! ಎರಡು ವರ್ಷದಿಂದ ಈ ಕಡೆ ಬರಲೇ ಇಲ್ಲ?'

'ಜಮೀನ್‌ದಾರಿ ತೆಗೆದುಕೊಂಡದ್ದು ನಿಮ್ಮ ಹುಡುಗನ ಹಾಗೆ ಇನ್ನೂ ಹೊಸದು. ನಾಲ್ಕು ವರ್ಷದ ಹಿಂದೆಯೇ ನಿಮ್ಮ ಹುಡುಗನಂತೆಯೇ ಕೋರ್ಟ್-ಆಫ್‌ವಾರ್ಡ್ಸ್‌ರಿಂದ ತೆಗೆದುಕೊಂಡೆ. ಹೋದ ವರ್ಷದಿಂದ ಮದುವೆಯಾದುದರಿಂದ ತಲೆಗೆ ಕಟ್ಟಿದ ಸಂಸಾರ ಜಮೀನ್‌ದಾರಿ ಜತೆಗೆ! ನಿಮ್ಮ ಹುಡುಗ ಪರವಾ ಇಲ್ಲ, ಅಜ್ಜಿ! ಒಳ್ಳೆ ಜಮೀನ್‌ದಾರನಾಗಿದ್ದಾನೆ!!'

'ಏನು ಪರವಾ ಇಲ್ಲವೋ ಬಿಡು. ಅವನಲ್ಲ ಜಮೀನ್‌ದಾರ; ಆ ರಂಭೆ!' ಎಂದು ಮಗನ ಕಡೆ ದುರದುರನೆ ನೋಡಿ ಹೇಳಿದಳು. ಜಯರಾಜ್ ಬಸವರಾಜನ ಕಡೆ ನೋಡುತ್ತಾ ಮುಗುಳು ನಗೆಯನ್ನು ಸೂಸಿದನು. ಮುದುಕಿಗೆ ಕೋಪವು ಇನ್ನೂ ಹೆಚ್ಚಾಯಿತು.

ಸಾಲದುದಕ್ಕೆ ಬಸವರಾಜ್, 'ಅಜ್ಜಿ! ನಿಮ್ಮ ಸೊಸೆ, ರಾಜಲಕ್ಷ್ಮಿ ಹಾಗೆ ನಿಮ್ಮ ಮನೆಗೆ ಬಂದ ಮೇಲೆ ಜಮೀನಾದಾರಿಯೇ ಉದ್ಧಾರವಾಗಿದೆ' ಎಂದನು.

'ಏನು ಉದ್ಧಾರವಾಗಿದೆ, ಬಸವು! ಅವರು ಅವನ್ನ ಒಂದು ವರ್ಷದ ಮಗುವಿದ್ದಾಗ ಬಿಟ್ಟುಹೋದರು. ನಮ್ಮ ಮಾವ ಸುಮ್ಮನೆ ಸಾಲಮಾಡಿದ್ದರಿಂದ ಕೋರ್ಟ್ಆಫ್‌ವಾರ್ಡ್ಸ್‌ರ ಅಧೀನಕ್ಕೆ ಜಮೀನ್‌ದಾರಿ ಹೋಗಿ, ಸಾಲ-ಸೋಲ ಎಲ್ಲಾ ತೀರಿ ಇವನಿಗೆ ಹದಿನೆಂಟು ವರ್ಷವಾಗುತ್ತಲೂ

ಚಮೀನ್‌ದಾರಿ ಬಂತು. ಮೊದಲು ಮೂರು ವರ್ಷ, ನನ್ನ, ಆ ಮ್ಯಾನೇಜರ್ ಶ್ರೀನಿವಾಸರಾಯನ ಮಾತು ಕೇಳಿಕೊಂಡು ಒಂದೂವರೆ ಲಕ್ಷ ಕೂಡಿಸಿಟ್ಟೆ. ಬಂದಳು ಆ ಮಹಾ ತಾಯಿ! ಸರಿ ಆಯ್ತು ಒಂದೂವರೆ ಲಕ್ಷಕ್ಕೂ ಖರ್ಚು!'

'ವ್ಯರ್ಥವಾಗಿ ಏನಾದರೂ ಖರ್ಚಾಯ್ತಾ ಅಜ್ಜಿ?' ಎಂದು ಬಸವ ರಾಜ್ ಕೇಳಿದನು. ಜಯರಾಜ್, ತಾಯಿ ಮತ್ತು ಗೆಳೆಯನ ಸಂವಾದ ವನ್ನು ಕೇಳುತ್ತ ಮನಸ್ಸಿನಲ್ಲಿಯೇ ಆನಂದಿಸುತ್ತಿದ್ದನು.

'ವ್ಯರ್ಥ ಅಲ್ಲದೆ ಏನೋ. ಇವಳಿಗ್ಯಾಕೋ ಈ ಊರಿಗೆಲ್ಲಾ ಎಲೆ-ಕ್ಟ್ರಿಕ್‌ಲೈಟ್? ಬೀದಿಬೀದಿಗೂ ಲೈಟ್! ಮನೆಮನೆಗೂ ಲೈಟ್! ಆ ಯಂತ್ರ ಗಿಂತ್ರ ತರಿಸೋಕೆ ಆಯ್ತು ನಲವತ್ತುಸಾವಿರ ರೂಪಾಯಿ. ಸರಿ, ಗಂಡ ಹೆಂಡಿರು ಸೋಫಾದ ಮೇಲೆ ಕುಳಿತುಕೊಂಡು ದೀಪ ಉರಿಸ್ತಾ, ಮುಂದೆ, ತಲೆಯ ಮೇಲೆ ಎಲ್ಲಾ ಎಲೆಕ್ಟ್ರಿಕ್ ಬೀಸಣಿಗೆ ಬೀಸಿಸಿಕೊಂಡು, ಆ ಕುಂಯ್ ಕುಂಯ್ ಅಂತ ರೇಡಿಯೋ ಕೇಳಿಕೊಂಡಿರೋಕೆ ಆಯ್ತು!!'

'ಊ!' ಎಂದು ಬಸವರಾಜ್ ತಲೆಯಲ್ಲಾಡಿಸಿದನು.

'ಊರ ಮುಂದಿನ ದೊಡ್ಡ ಬಾವಿಗೆ ಪಂಪು. ಅದಕ್ಕೊಂದು ಐದು ಸಾವಿರ ಖರ್ಚು. ಬೀದಿಬೀದಿಗೂ ನಲ್ಲಿ!'

'ಬಹಳ ತಪ್ಪು ಕೆಲಸ!' ಎಂದು ಬಸವರಾಜ್ ಗೆಳೆಯನ ಕಡೆ ನೋಡಿ ನಿಟ್ಟುಸಿರು ಬಿಟ್ಟನು.

ಮುದುಕಿಯು ಮುಂದುವರಿಸಿದಳು. 'ಇವೆಲ್ಲಾ ಆಯ್ತಲ್ಲಾ ಬಸವು! ಕೊಂಚವಾದರೂ ದೊಡ್ಡ ಮನೆತನದ ಘನಗಾಂಭೀರ್ಯ ಬೇಡವೇನೋ ಇವರಿಬ್ಬರಿಗೂ. ಸಾಯಂಕಾಲ ಬೀದೀಲಿ ಇಬ್ಬರೂ ನಡಕೊಂಡು ಹೋಗಿ ಬರೋದೇನೋ! ಜನ ಏನೆಂದುಕೊಳ್ತಾರೋ!'

'ಅದು ಈ ಕಾಲದವರ ತರಹ ಅಜ್ಜಿ.'

'ಏನು ತರಹವೋ, ಬಸವು! ಅವಳ ಕುದುರೆ ಸವಾರಿ ಗಂಡುಬೀರಿ ಯಂತೆ ಏನೋ! ಅದಕ್ಕೆ ಕೋಟೆ-ಗೋಡೆ ಸುತ್ತಲೂ ಕುದುರೆ ಓಡೋದಕ್ಕೆ ದಾರಿ. ಅದಾದ ಮೇಲೆ ಆ ಬಾವೀಲಿ ಈಜೋದು. ಆ ಕೋಟೆ-ಬಾವಿ ಸರಿ ಮಾಡಿಸೋಕೆ ಹತ್ತುಸಾವಿರ ಖರ್ಚು. ಅದರ ನೀರನ್ನೆಲ್ಲ ತೆಗೆಸಿ ಹಾಕಿ,

ಅದರ ಮಧ್ಯಕ್ಕೆ ಸಿಮೆಂಟು-ಗೋಡೆ ಹಾಕಿಸಿ, ಒಂದರ್ಧದಲ್ಲಿ ಆ ಕಾಲಿಗೆ ಸುತ್ತಿಕೊಳ್ಳೋ ತಾವರೆ ಹಾಕಿ, ಇನ್ನೊಂದು ಭಾಗದಲ್ಲಿ ಇವರು ಈಜೋಕೆ! ಆ ಬಾವಿ ಹತ್ತಿರ ಅವಳಿಗೆ ಹೂವಿನ ತೋಟ ಬೇರೆ. ಬೆಂಗಳೂರಿನಿಂದ ಬಂದ ಇಬ್ಬರು ಮಾಲೀಗಳಿಗೆ ಜೇರೆ ತಿಂಗಳು ತಿಂಗಳಿಗೂ ಋಣ! ತೋಟಕ್ಕೊಂದು ಐದುಸಾವಿರ ಖರ್ಚು. ಎಲ್ಲಾ ಹಾಳಾಗೋಯ್ತು, ಬಸವು! ಅವರಿದ್ದಿದ್ದರೆ ಅವನೂ ನನ್ನ ಮಾತು ಕೇಳಿಕೊಂಡು ಸರಿಯಾಗಿರ್ತಿದ್ದ. ಏನು ಮಾಟ ಮಾಡಿದ್ದಾಳೋ ಆ ಮೋಹಿನಿ! ಅವಳ ಮುಖ ನೋಡಿದರೆ ತಣ್ಣಗಾಗಿ ಹೋಗ್ತಾನೆ. ಆ ಮುದುಕ ಮ್ಯಾನೇಜರ್ ಶ್ರೀನಿವಾಸರಾಯ ಹಿಂದೆಲ್ಲಾ ಹಾಗೆ ಬಿಗಿ ಕೈಯಿಂದಿದ್ದು ಜಮೀನ್‌ದಾರಿನ ಉದ್ಧಾರ ಮಾಡಿದೋನು ಅವನೂ ಇವರ ಸೂತ್ರದ ಗೊಂಬೆ ಆಗಿ, ಹೇಗಂದರೆ ಹಾಗೆ ಕುಣೀತಾನೆ! ಒಳ್ಳೆ ಮಾಟಗಾತಿ ಆಗಿ ಹೋಗಿದ್ದಾಳೋ ಅವಳು, ಬಸವು!' ಎಂದು ಮುದುಕಿ ಕಣ್ಣೀರನ್ನೊರಸಿಕೊಂಡು ಮಗನ ಕಡೆ ಮರಮರನೆ ನೋಡಿದಳು.

'ಹೋಗಲಿ ಚಿಕ್ಕವರು ಬಿಡಜ್ಜಿ!!

'ಏನು ಚಿಕ್ಕವರೋ, ಬಸವು! ಚಿಕ್ಕವರಾಗಿದ್ದರೆ ದೊಡ್ಡವರು ಹೇಳಿದ್ದನ್ನು ಕೇಳಬೇಡವೇನೋ? ಅದೇನು ತುಪಾಕಿ ಹಿಡಿದುಕೊಂಡು ಇವರು ಇಬ್ಬರೂ ಕಾಡಿಗೆ ಹೋಗಿ ಅಲ್ಲಿ ಜಿಂಕೆ, ಕಾಡಹಂದಿ ಎಲ್ಲಾ ಕೊಲ್ಲೋದು. ಜನ ಎಲ್ಲಾ ನಗ್ತಾರಲ್ಲೋ. ನಾನು ತಲೆ ಎತ್ತಿಕೊಂಡು ತಿರುಗೋಕೆ ಆಗೋದಿಲ್ಲ!'

'ಓ!' ಎಂದು ಬಸವರಾಜ್ ಆಶ್ಚರ್ಯವನ್ನು ಸೂಚಿಸಿದನು.

'ಮನೆ ಎಲ್ಲಾ ಹಾಳಾಗಿ ಹೋಯ್ತು, ಬಸವು! ನನ್ನ ಎಲ್ಲಾ ಒಡವೇನೂ, ಎರಡು ಲಕ್ಷದ್ದು, ಒಬ್ಬಳೇ ಸೊಸೇಸಲ್ಲಾ ಅಂತ ಅವಳಿಗೆ ಮದುವೇಲಿ ಕೊಟ್ಟೆ. ನಾಲ್ಕು ದಿನದ ಹಿಂದೆ ಇವರು ಮದರಾಸಿಗೆ ಹೋಗಿ ಹತ್ತುಸಾವಿರ ಖರ್ಚುಮಾಡಿ ಆ ನವರತ್ನ ಮಾಲೆನ ತರದೆ ಹೋಗಿದ್ದರೆ ಏನಳುತ್ತಿತ್ತು! ಆ ಬಾವಿ ಪಕ್ಕದಲ್ಲಿರೋ ತೋಟದ ಹತ್ತಿರ ಆ ದೊಡ್ಡ ಮಂಟಪ ಯಾಕೆ? ಅದ್ಯಾರೋ ಗವರ್ನರು ಬರ್ತಾರಂತಲ್ಲ; ಅಂಥಾವರು ಎಷ್ಟು ಜನ ಎಷ್ಟು ಸಲ ಬಂದು ಹೋಗಿಲ್ಲ ಈ ಊರಿಗೆ? ಆಗೆಲ್ಲಾ ಹೀಗೇ ಖರ್ಚು ಮಾಡಿದೊ? ನಾನಾಗೋ ವ್ಯಾಳೆಗೆ ಹೀಗೆಲ್ಲಾ ಸಹಿಸಿಕೊಂಡಿ

ದ್ದೇನೋ, ಬಸವು! ನಿನ್ನಮ್ಮ ಆಗಿದ್ದರೆ ಅಟ್ಟಿ ಬಿಡ್ತಿದ್ಲು ಮನೆ ಬಿಟ್ಟು.'

'ಅಮ್ಮ ನಾನು ಏನು ಮಾಡಿದರೂ ಏನೂ ಹೇಳೋದಿಲ್ಲ ಅಜ್ಜಿ.'

'ನೀನು ಹೀಗೆ ಪೋಲಿ ಪೋಲಿಯಾಗಿ ಖರ್ಚು ಮಾಡುತ್ತೀಯೇನೋ? ನೀನೇ ಹೋಗಿ ಕಣ್ಣಾರೆ ನೋಡು. ಈ ರೂಮು ನೋಡು! ಮೇಲೆ ದೀಪ; ಪಕ್ಕದಲ್ಲಿ ದೀಪ. ಮೇಲೆ ಫ್ಯಾನು, ಪಕ್ಕದಲ್ಲಿ ಫ್ಯಾನು. ಅದೇನು ಬಣ್ಣಬಣ್ಣದ ಬಟ್ಟೆಗಳು ಚಿತ್ರಗಳೋ! ಇವೆಲ್ಲಾ ಸುಮ್ಮನೆ ಬರುತ್ತವೆಯಾ? ಹೀಗೆ ಇದ್ದರೆ ನಾಳೆ ವರ್ಷದ ವ್ಯಾಳೆಗೆ ಲಕ್ಷ ಸಾಲ ಆಗುತ್ತೆ; ಆಮೇಲೆ ಜಮೀನ್‌ದಾರಿ ಪುನಃ ಹೋಗುತ್ತೆ ಕೋರ್ಟ್ ಆಪ್ ವಾರ್ಡ್ಸ್‌ರ ವಶಕ್ಕೆ! ಹಾಕ್ಕೆಂತಾನೆ ಬಾಯಲ್ಲಿ ಮಣ್ಣು! ಇವಳೂರಿನಲ್ಲಿ ಹೀಗೆಲ್ಲಾ ಏಕೆ ಮಾಡಲಿಲ್ಲ ಇವಳು? ಇವಳಣ್ಣನ್ನ ನೋಡು, ಎಷ್ಟು ಜಿಪುಣ ಆಗಿದ್ದಾನೆ! ಮದುವೆಯಲ್ಲಿ ತಂಗೀಗೇ ಸರಿಯಾದೊಂದು ಸೀರೇನೂ ತೆಗೀಲಿಲ್ಲ! ಹೇಳೋ ಗಾದೆ ಇವನಿಗೆ ಸರಿಯಾಗಿದೆ. 'ಮುಂಡೆ ಸಾಕಿದ ಮಗ, ಮೂಗುದಾರವಿಲ್ಲದ ಎತ್ತು!'

'ಸುಮ್ಮನಿರಮ್ಮ ಸಾಕು!' ಎಂದು ಜಯರಾಜ್ ಕೋಪದಿಂದ ಹೇಳಿದನು.

'ಎಲ್ಲಾದರೂ ಹಾಳಾಗಿ ಹೋಗಲಿ ಬಿಡು, ಬಸವು!' ಎಂದು ಕೈಯಲ್ಲಾಡಿಸುತ್ತಾ ಮುದುಕಿ ಹೊರಟುಹೋದಳು.

ಜಯರಾಜ್ ಎಡಗಡೆಯ ಬಾಗಿಲನ್ನು ತೆಗೆದು ಒಳಗೆ ಹೋಗಿ, ಸ್ವಲ್ಪ ಹೊತ್ತಾದ ಮೇಲೆ ಉಮಾದೇವಿಯೊಡನೆ ಡ್ರಾಯಿಂಗ್ ರೂಮಿಗೆ ಬಂದನು. ಉಮಾ ಇಪ್ಪತ್ತು ವರ್ಷದ ಯುವತಿ. ಪುಣ್ಯವಂತರ ಮನೆಯಲ್ಲಿ ಹುಟ್ಟಿ ಪುಣ್ಯವಂತರ ಮನೆಯನ್ನು ಸೇರಿದ್ದಳು. ತಂದೆ ಚಿಕ್ಕಂದಿನಲ್ಲಿಯೇ ತೀರಿ ಹೋಗಿದ್ದುದರಿಂದ ಅವಳನ್ನೂ ಅವಳ ಅಣ್ಣನನ್ನೂ ಅವಳ ತಾಯಿ ಅಚ್ಚುಮೆಚ್ಚಾಗಿ ಸಾಕಿದ್ದಳು. ಉಮಾ ವಿಶ್ವವಿದ್ಯಾನಿಲಯದ ಬಿ. ಎ. ಪದವೀಧರಳಾಗಿ ಅರ್ಥಶಾಸ್ತ್ರದಲ್ಲಿ ವಿಶ್ವವಿದ್ಯಾನಿಲಯದಲ್ಲಿ ಮೊದಲನೆಯವಳಾಗಿ ತೇರ್ಗಡೆ ಹೊಂದಿ ಸುವರ್ಣಪದಕವನ್ನು ಪದವೀದಾನ ಮಹೋತ್ಸವದಲ್ಲಿ ಪಡೆದಿದ್ದಳು. ಅವಳ ಎತ್ತರವಾದ ಆಕೃತಿ, ಆಕೃತಿಗೆ ತಕ್ಕಂತೆ ವಿಶಾಲವಾದ ಹಣೆ, ಹಣೆಯ ಮೇಲೆ ಹಾರುತ್ತಿದ್ದ ಕುರುಳು, ಇವೆಲ್ಲಕ್ಕೂ ಅನುಗುಣ

ವಾದ ಉಡಿಗೆ; ಮತ್ತು ದೇವರು ಕೊಟ್ಟಿರುವ ರೂಪವನ್ನು ಮುಚ್ಚದಿರು ವಂತೆ ಐಶ್ವರ್ಯವಂತೆ ಎಂದು ತೋರಿಸುವಂತಹ ಒಂದೆರಡು ಒಡವೆಗಳು ಅವಳ ಕತ್ತು ಕೈಗಳಲ್ಲಿ ಒಪ್ಪುತ್ತಿದ್ದುವು. ಅವಳ ಅತ್ತೆ ಹೇಳುವಂತೆ ಆಕೆ ಮೋಹಿನಿಯೇ ಆಗಿದ್ದಳು. ಅವಳು ಒಂದ ಮೇಲೆ ಅವಳ ಜಮೀನ್‌ದಾರಿ ಯನ್ನೇ ಆದರ್ಶವಾದುದನ್ನಾಗಿ ಮಾಡಿ, ಜಮೀನ್‌ದಾರಿಗೆ ಸೇರಿದ ಅರವತ್ತು ಹಳ್ಳಿಗಳ ಜನರಿಂದಲೇ— ಏಕೆ ಸುತ್ತಮುತ್ತಲಿನ ಊರೆಲ್ಲರವರಿಂದಲೂ— 'ರಾಜ್ಯಲಕ್ಷ್ಮಿ' ಎನ್ನಿಸಿಕೊಂಡಿದ್ದಳು.

ಜಮೀನ್‌ದಾರಿಯ ಆದಾಯ ವರ್ಷಕ್ಕೆ ತೊಂಭತ್ತು ಸಾವಿರ ರೂಪಾಯಿ. ಅದಕ್ಕೆ ಇಂಡಿಯಾ ಸರ್ಕಾರಕ್ಕೆ ಕೊಡಬೇಕಾಗಿದ್ದ ಪೇಷ್‌-ಕಿಸ್ತು ಇಪ್ಪತ್ತನಾಲ್ಕು ಸಾವಿರ ರೂಪಾಯಿ. ಪೋಲೀಸೊಂದು ವಿನಃ ಮಿಕ್ಕ ಜಮೀನ್‌ದಾರಿಯ ಆಡಳಿತವೆಲ್ಲಾ ಜಮೀನ್‌ದಾರರಿಗೇ ಸೇರಿತ್ತು. ಹಿಂದೆ ಜಮೀನ್‌ದಾರರನ್ನು ಪಾಳೆಯಗಾರರೆಂದು ಕರೆಯುತ್ತಿದ್ದರು. ಈಗಲೂ ಹಳ್ಳಿಯವರು ಅವರನ್ನು ಹಾಗೆಯೇ ಕರೆಯುತ್ತಾರೆ.

ಉಮಾದೇವಿ ಊರಿಗೆ ಡೈನಮೋದಿಂದ ವಿದ್ಯುತ್ತನ್ನು ನಿರ್ಮಿಸುವಂತೆ ಏರ್ಪಾಟು ಮಾಡಿ, ಅದರಿಂದ ವ್ಯವಸಾಯಕ್ಕೆ ನೀರೆತ್ತಲು ಬಹಳ ಅನುಕೂಲ ವನ್ನು ಕಲ್ಪಿಸಿದ್ದೇ ಅಲ್ಲದೆ ಊರಿಗೆಲ್ಲಾ ನಲ್ಲಿಗಳ ಸಹಾಯದಿಂದ ನೀರೊದಗಿ ಸುವ ಏರ್ಪಾಡನ್ನೂ ಮಾಡಿಸಿದ್ದಳು. ಹಳ್ಳಿಯವರಿಗೆ ಬೇಕಾದ ಸಹಾಯ ವನ್ನೆಲ್ಲಾ ನೀಡಿ, ಜಮೀನ್‌ದಾರಿಯ ಆದಾಯವು ಇನ್ನೂ ಎಂಟುಸಾವಿರ ಒಂದು ವರ್ಷದಲ್ಲಿಯೇ ಹೆಚ್ಚಾಗುವಂತೆ ಮಾಡಿದ್ದಳು.

ಜಯರಾಜ್ ಉಮಾದೇವಿಗೆ, 'ಇವರೇ ನನ್ನ ಸಹಪಾಠಿ, ಗೆಳೆಯರು, ಜಮೀನ್‌ದಾರ್ ಬಸವರಾಜ್' ಎಂದು ನಿಂತಿದ್ದ ಗೆಳೆಯನ ಪರಿಚಯವನ್ನು ಮಾಡಿಕೊಟ್ಟನು.

ಉಮಾದೇವಿ ವಂದಿಸಿದ ಬಸವರಾಜ್‌ಗೆ ಮುಗುಳುನಗೆಯಿಂದ ನಮ ಸ್ಕಾರ ಮಾಡಿ, 'ಸುಶೀಲಾದೇವಿಯೊಡನೆ ಬುಧವಾರ ತಾವೂ ಇಲ್ಲಿಗೆ ದಯಮಾಡಿಸಬೇಕು, ಇಲ್ಲಿ ಗವರ್ನರವರಿಗೆ ಕೊಡುವ ಅಡ್ರೆಸ್ಸಿಗೆ' ಎಂದಳು.

'ಖಂಡಿತ ಬರುತ್ತೇವೆ, ತಂಗಿ!' ಎಂದು ಬಸವರಾಜ್ ಹೇಳಿ, 'ನಿಮ್ಮ ಅಣ್ಣನೂ ಬರುತ್ತಾನೆ ತಾನೆ?' ಎಂದು ಕೇಳಿದನು.

‘ ಹುಂ ! ಪೆಂಡಾಲ್ ಎಲ್ಲಾ ನೋಡಿದಿರಾ ? ’ ಎಂದು ಉಮಾದೇವಿ ಕೇಳಿದಳು.

‘ ಇನ್ನೂ ಇಲ್ಲ. ಹೋಗಿ ನೋಡುತ್ತೆನಮ್ಮ. ನಾನೂ ನಿಮ್ಮ ಮತ್ತು ನಿಮ್ಮ ಜಮೀನ್‌ದಾರಿಯು ವಿಚಾರ ಕೇಳಿ, ಇಲ್ಲಿ ನೀವು ಹೇಗೆ ಏರ್ಪಾಡು ಮಾಡಿದ್ದೀರೋ ನೋಡಿಕೊಂಡು ಹೋಗೋಣ ಅಂತಲೇ ಬಂದೆ. ಗುರುವಾರ ಗವರ್ನರವರು ನಮ್ಮೂರಿಗೆ ಬರುತ್ತಾರೆ. ನೀವೂ ದಯಮಾಡಿಸ ಬೇಕು. ಏನು ಜಯರಾಜ್? ’ ಎಂದು ಜಯರಾಜನ ಬೆನ್ನಿನ ಮೇಲೆ ಬಸವರಾಜ್ ಕೈಹಾಕಿ ಕೇಳಿದನು.

‘ ಅದಕ್ಕೇನು. ’ ಎಂದು ಜಯರಾಜ್ ಹೇಳಿದನು.

‘ ಬರುತ್ತೇವೆ ’ ಎಂದು ಉಮಾದೇವಿಯೂ ಹೇಳಿದಳು.

ಆಗ ಅಡಿಗೆಯವನು ಬಂದು, ‘ ತಾಯಿ, ಪುರೋಹಿತರು ಬಂದಿದ್ದಾರೆ; ಗೌರಿಯ ಪೂಜೆಗೆ ಎಲ್ಲಾ ಸಿದ್ಧವಾಗಿದೆ ’ ಎಂದನು.

‘ ಅಪ್ಪಣೆಯಾ ? ’ ಎಂದು ಗಂಡನ ಮತ್ತು ಬಸವರಾಜನ ಕಡೆ ಕೈಮುಗಿದು ಉಮಾ ಕೇಳಿದಳು.

‘ ನಮಸ್ಕಾರ ತಂಗಿ. ’ ಎಂದು ಬಸವರಾಜ್ ಕೈಮುಗಿದನು. ಉಮಾ ದೇವಿ ಪೂಜೆ ಮಾಡಲು ಹೊರಟು ಹೋದಳು.

‘ ಬಾರಯ್ಯ ದೊರೆ ! ನಿಮ್ಮ ತಾಯಿ ಹೇಳಿದ್ದನ್ನೆಲ್ಲ ತೋರಿಸು. ಹೊರಗಿನ ನಲ್ಲಿ, ದೀಪ ಎಲ್ಲಾ ನೋಡಿದ್ದೇನೆ. ಮಿಕ್ಕದ್ದನ್ನೆಲ್ಲಾ ತೋರಿ ಸಪ್ಪಾ. ಇನ್ನು ಮೇಲೆ ನಿನ್ನ ಊರಿನ ಅಭಿವೃದ್ಧಿಯನ್ನು ನೋಡಿ ಕಲಿತು ಕೊಳ್ಳುವುದಕ್ಕಾದರೂ ವರ್ಷಕ್ಕೊಂದು ಸಲವಾದರೂ ಬರುತ್ತೇನೆ ’ ಎಂದು ಬಸವರಾಜ್ ಹೇಳಿದನು.

ಜಯರಾಜ್, ಅರಮನೆಯಂತಿದ್ದ—ಊರವರೆಲ್ಲರೂ ಅರಮನೆಯೆಂದು ಕರೆಯುತ್ತಿರುವ—ತನ್ನ ಮನೆಯ ಸುತ್ತಲೂ ಇದ್ದ ಕೋಟೆ-ಗೋಡೆಯ ಪಕ್ಕದಲ್ಲಿಯೇ ಕುದುರೆ ಓಡಲು ಏರ್ಪಡಿಸಿದ್ದ ದಾರಿಯ ಎಡಪಕ್ಕದಲ್ಲಿ ಕೋಟೆ-ಗೋಡೆಯ ಬಲಗಡೆಯಲ್ಲಿ ಅರಮನೆಯ ವರೆಗೂ ಹಸುರಿದ್ದ, ಸೊಬ

ಗನ್ನು ತೋರಿಸುತ್ತ ಗೆಳೆಯನನ್ನು ಕುದುರೆಯ ರಸ್ತೆಯಲ್ಲಿಯೇ ಕರೆದು ಕೊಂಡು ಹೋದನು.

ಇಬ್ಬರೂ ಅರಮನೆಯ ಬಾವಿಯ ಬಳಿಗೆ ಬಂದರು. ಅದು ಪುರಾತನ ಕಲ್ಲು-ಕಟ್ಟಡದ ವಿಶಾಲವಾದ ಕೊಳ. ಅದು ಸಿಮೆಂಟು ಗೋಡೆಯಿಂದ ಎರಡು ಭಾಗ ಮಾಡಲ್ಪಟ್ಟಿತ್ತು. ಬಲಗಡೆ ಭಾಗದಲ್ಲಿ ಕಮಲ—ಬಿಳಿ ಮತ್ತು ಕೆಂಪು—ಪುಷ್ಕಳವಾಗಿ ಬೆಳೆದು ತಿಳಿ ನೀರಿನಲ್ಲಿ ಪ್ರತಿಬಿಂಬಿಸುತ್ತಿದ್ದುವು. ಎಡ ಭಾಗದಲ್ಲಿ ನೀರು ಸ್ವಚ್ಛವಾಗಿ ಅದನ್ನು ನೋಡುವವರ ಆಕೃತಿಯನ್ನು ಪ್ರತಿಬಿಂಬಿಸಿ ' ಇಳಿ ! ' ಎನ್ನುವಂತಿತ್ತು.

' ಬಹಳ ಚೆನ್ನಾಗಿದೆ, ಜಯರಾಜ್ ! ಒಂದು ಲಕ್ಷಾನ ಬೇಕಾದರೂ ಇಂಥ ಕೊಳಕ್ಕೆ ಖರ್ಚು ಮಾಡಲು ಸಿದ್ಧನಾಗಿದ್ದೇನೆ ' ಎಂದು ಬಸವರಾಜ್ ಹೇಳಿದನು. ಜಯರಾಜ್ ನಸುನಕ್ಕು, ಗೆಳೆಯನನ್ನು ಕೊಳದ ಬಳಿ ಇದ್ದ ಉದ್ಯಾನವನಕ್ಕೆ ಕರೆದುಕೊಂಡು ಹೋದನು.

ಅದು ಒಂದು ಸಣ್ಣ ಕೈತೋಟದಂತಿತ್ತು. ಎಲ್ಲಾ ವಿಧವಾದ ಗಿಡ-ಬಳ್ಳಿಗಳೂ ಅದರಲ್ಲಿ ಬೆಳೆದಿದ್ದುವು. ಗುಲಾಬಿ ಮಲ್ಲಿಗೆಯಂತೂ ಅಂತಹ ಗಾತ್ರವನ್ನು ಇನ್ನೆಲ್ಲಿಯೂ ಕಂಡಿರಲಿಲ್ಲ ! ಪಚ್ಚೆತೆನೆಯು ವನವಾಗಿ ಹಬ್ಬಿತ್ತು. ಆ ಉದ್ಯಾನವನದಲ್ಲಿ ಎರಡು ಕಲ್ಲು-ಮಂಚಗಳಿದ್ದುವು. ಪಕ್ಕದಲ್ಲಿದ್ದ ಕೊಳದಿಂದ ವಿದ್ಯುತ್ತಿನ ಸಹಾಯದಿಂದ ಆ ತೋಟಕ್ಕೆ ನೀರೆತ್ತುವ ಏರ್ಪಾಡಿತ್ತು.

ಬಸವರಾಜ್ ಒಂದು ಗುಲಾಬಿ ಒಂದು ಮಲ್ಲಿಗೆಯನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡು, ' ಇವಕ್ಕೆ ಇಂಡಿಯಾದ ತೋಟಗಳ ಸ್ಪರ್ಧೆ ಯಲ್ಲಿ ಮೊದಲನೆಯ ಬಹುಮಾನ ಬರುತ್ತದಯ್ಯಾ! ' ಎಂದು ಹೇಳಿ, ತನ್ನ ಕೈಗಡಿಯಾರದ ಕಡೆ ನೋಡಿ, ' ಆಗಲೇ ಹನ್ನೆರಡಾಯ್ತು! ನಾಲ್ಕು ಗಂಟೆ ಹೊತ್ತು ಎಷ್ಟು ಬೇಗ ನಿನ್ನ ಮನೆಯಲ್ಲಿ ಕಳೆದು ಹೋಯಿತು ಜಯರಾಜ್! ಬೇಗ ನಿನ್ನ ಪೆಂಡಾಲನ್ನು ನೋಡಿ ಹೋಗುತ್ತೇನೆ ' ಎಂದನು.

' ಇಲ್ಲೇ ಊಟ ಮಾಡಿಕೊಂಡು ಹೋಗು, ಬಸವರಾಜ್. '

' ಬೆಳಗ್ಗಿನ ನಿಮ್ಮ ಮನೆ ತಿಂಡಿೀನೇ ಊಟಕ್ಕೆ ಎರಡಷ್ಟಾಗಿದೆ. ಇನ್ನು ಮಧ್ಯಾಹ್ನ ಎರಡು ಗಂಟೆ ವರೆಗೂ ಊಟವೇ ಬೇಡ. ಇಲ್ಲಿಂದ

ಹೋದ ಮೇಲೆ ಎಲ್ಲಾ ಏರ್ಪಾಡೂ ಮಾಡಬೇಕು. ನೀನು 'ಅಡ್ರೆಸ್' ಪ್ರಿಂಟು ಮಾಡಿಸಿದ್ದೀಯಾ?'

'ಇನ್ನೂ ಇಲ್ಲ. ಎಲ್ಲಾ ಉಮಾಗೇ ಬಿಟ್ಟಿದ್ದೇನೆ.'

'ನೀನು ಪುಣ್ಯವಂತನಪ್ಪ! ನಾನೇ ಹೋಗಿ ಎಲ್ಲಾ ನೋಡಿಕೋಬೇಕು!' ಎಂದು ಬಸವರಾಜ್ ಜಯರಾಜನೊಡನೆ ಉದ್ಯಾನವನದ ಪಕ್ಕದಲ್ಲಿದ್ದ ಚಪ್ಪರದೊಳಕ್ಕೆ ಬೇಗಬೇಗ ಬಂದನು.

ಚಪ್ಪರವು ಬಹಳ ಸೊಗಸಾಗಿ ನಿರ್ಮಿತವಾಗುತ್ತಿತ್ತು. ಮ್ಯಾನೇಜರ್ ಶ್ರೀನಿವಾಸರಾಯರು ಅದಕ್ಕಾಗಿ ಬೆಂಗಳೂರು ಮದರಾಸುಗಳಿಂದ ಕುಶಲ ಕೆಲಸಗಾರರನ್ನು ಕರೆಯಿಸಿ ಅವರಿಂದ ಕೆಲಸ ಮಾಡಿಸುತ್ತಿದ್ದರು. ಚಪ್ಪರವನ್ನೂ ವಿದ್ಯುದ್ದೀಪಗಳಿಂದ ಬೆಳಗುವಂತೆ ಮಾಡುವ ಏರ್ಪಾಡೂ ಆಗುತ್ತಿತ್ತು.

'ನಾಳೆಗೆ ಮುಗಿಯುತ್ತದೆಯಾ?' ಎಂದು ಬಸವರಾಜ್ ಶ್ರೀನಿವಾಸರಾಯರನ್ನು ಕೇಳಿದನು.

'ಚಪ್ಪರ ನಾಳೆ ಮುಗಿಯುತ್ತೆ, ಸ್ವಾಮಿ. ಪ್ಲಾಟ್‌ಫಾರಂ, ಅದರ ಅಲಂಕಾರ, ಚಪ್ಪರದ ಮೂರು ಕಡೆಗಳಲ್ಲಿಯೂ ಹೂ-ಕುಂಡಗಳನ್ನಿಡುವುದು ಇವೆಲ್ಲಾ ಮಂಗಳವಾರದ ವೇಳೆಗೆ ಮುಗಿಯಬಹುದು' ಎಂದು ಶ್ರೀನಿವಾಸರಾಯರು ಹೇಳಿದರು.

'ತಾನು ಇನ್ನೂ ಏನೂ ಮಾಡಿಸಲಿಲ್ಲವಲ್ಲಾ!' ಎಂದು ಬಸವರಾಜನ ಎದೆ ಜೋರಾಗಿ ಒಡದುಕೊಳ್ಳಲು ಆರಂಭಿಸಿತು. ಜಯರಾಜನ ಜೊತೆಯಲ್ಲಿ ಆತ ಕೋಟೆ-ಬಾಗಿಲ ವರೆಗೂ ಬಂದು, ಬಾಗಿಲ ಮುಂದಿದ್ದ ರಸ್ತೆಯಲ್ಲಿದ್ದ ತನ್ನ ಕಾರಿನಲ್ಲಿ ಕುಳಿತು, 'ಜಯರಾಜ್! ಬುಧವಾರ ಬೆಳಗ್ಗೆ ಬರುತ್ತೇವೆ; ಮನೆಯವರಿಗೂ ತಿಳುಹಿಸು' ಎಂದನು. ಕಾರು ಹೊರಟಿತು.

—

೨

'ಏನು ನೀವು ಬಂದಿರುವುದು ?' ಎಂದು ಗೇಟಿನ ಬಳಿ ಕಾಯು ತ್ತಿದ್ದ ಆಳು, ಮುಂದೆ ನಿಂತಿದ್ದ ಗುಂಪನ್ನು ಕೇಳಿದನು.

'ದೊರೆಗಳನ್ನು ನೋಡಬೇಕು' ಎಂದು ಗುಂಪಿನ ಮುಖಂಡ ಹೇಳಿದನು.

'ಅವರು ಊರಲ್ಲಿಲ್ಲ. ದೊಡ್ಡ ಇಂಗ್ಲಿಷ ದೊರೆಗಳನ್ನು ನೋಡೋದಕ್ಕೆ ಹೋಗಿದ್ದಾರೆ.'

'ಮ್ಯಾನೇಜರಿದ್ದಾರೆಯೋ ?'

'ಇದ್ದಾರೆ; ನಾಳೆ ದೊಡ್ಡ ಇಂಗ್ಲಿಷ ದೊರೆ ಬರೋದರಿಂದ ಮಂಟಪ ಕಟ್ಟಿಸ್ತಿದ್ದಾರೆ. ಇಲ್ಲಿಗೆ ಬರಲು ಅವರಿಗೆ ಬಿಡುವಿಲ್ಲ.'

'ಚಿಕ್ಕಮ್ಮಣ್ಣಿಯವರಿಗೆ ನಾವು ಬಂದಿದ್ದೇವೆಂದು ಹೇಳು.'

'ಚಿಕ್ಕಮ್ಮಣ್ಣಿಯವರಿಗೆ ಈಗ ನಿಮ್ಮನ್ನು ನೋಡಲು ಬಿಡುವಿಲ್ಲ.'

'ನಾವು ನೋಡಲೇಬೇಕು. ನಮ್ಮ ಪ್ರಾಣಗಳು ಹೋಗುತ್ತಲಿವೆ. ಹೋಗಿ ಹೇಳು!' ಎಂದು ಗುಂಪು ಕೂಗಿಕೊಳ್ಳಲು ಪ್ರಾರಂಭಿಸಿತು.

ಆಳು ಹೆಬ್ಬಾಗಿಲನ್ನು ತಳ್ಳಿ, ಒಳಗಡೆ ಬೀಗ ಹಾಕಿದನು.

ಆ ಗುಂಪಿನ ಶಬ್ದವನ್ನು ಮಹಡಿಯ ಮೇಲಿನಿಂದ ಕೇಳಿ ಅಲ್ಲಿಂದಲೇ ಹೆಬ್ಬಾಗಿಲಿನ ಆಚೆಯ ರಸ್ತೆಯಲ್ಲಿದ್ದ ಗುಂಪನ್ನು ಕಿಟಕಿಯಿಂದ ನೋಡಿದ ಉಮಾದೇವಿ, ಮಹಡಿಯ ಮೆಟ್ಟಲುಗಳನ್ನು—ಹಿಮವತ್ಪರ್ವತವನ್ನಿಳಿಯುವ ಪಾರ್ವತಿಯಂತೆ—ಇಳಿದು, ಬಾಗಿಲ ಬಳಿ ಬಂದು, ಆಳಿಗೆ 'ಬಾಗಿಲನ್ನು ತೆಗೆ' ಎಂದಳು.

ಆಳು ಮರುಮಾತನಾಡದೆ ಬಾಗಿಲನ್ನು ತೆಗೆದನು.

'ಅಮ್ಮಾ! ನಮ್ಮ ಪ್ರಾಣಾನ ಕಾಪಾಡಬೇಕು.' ಎಂದು ಕೈ ಮುಗಿಯುತ್ತಾ ಮುಖಂಡನು ಹೇಳಿದನು.

'ಏನಾಗಿದೆಯಪ್ಪಾ ನಿಮಗೆ ?'

'ತಾಯಿ! ಮೂರು ದಿನಗಳಿಂದ ನಮ್ಮ ಕುರಿ, ಆಕಳು ಪತ್ತೆ ಇಲ್ಲದೆ ಹೋಗುತ್ತಿವೆ. ನಿನ್ನೆ ಸಂಜೆಗೆ ಮುನೇಶಿಗ ತನ್ನ ಒಂಟೆತ್ತಿನೊಡನೆ ಕೆರೆಯ

ಕೆಳಗೆ ಬರುತ್ತಿರುವಲ್ಲಿ ಬರುತ್ತಿದ್ದ ದೊಡ್ಡ ಹುಲೀನ ನೋಡಿ, ಎತ್ತನ್ನಲ್ಲಿಯೇ ಬಿಟ್ಟು, ದೂರ ಓಡಿ ಹೋಗಿ, ಅಲ್ಲಿದ್ದ ಹೊಂಗೇ ಮರಾನ ಹತ್ತಿದ. ಆ ಹುಲಿ ಎತ್ತಿನ ಮೇಲೆ ಹಾರಿ, ಅದನ್ನು ಕೊಂದು, ಅದರ ದೇಹದಲ್ಲಿ ಅರ್ಧ ತಿಂದುಹಾಕಿದೆ. ಬೆಳಗಾಗೋವಲ್ಲೆ ಓಡಿ ಹೋಯಿತಂತೆ! ರಾತ್ರಿಯೆಲ್ಲಾ ಮರದ ಮೇಲಿದ್ದ ಮುನೇಶಿಗ ಬೆಳಗ್ಗೆ ಹಳ್ಳಿಗೆ ಬಂದು ನಮಗೆಲ್ಲಾ ಹೇಳಿದ. ಈ ದಿನ ರಾತ್ರಿ ಅದು ಪುನಃ ಆ ಎತ್ತನ್ನು ತಿನ್ನೋದಕ್ಕೆ ಬರುತ್ತೆ. ಅಮ್ಮಾ, ನಮ್ಮ ಆಕಳು, ನಾವು ಬಾಳೋಹಾಗಿಲ್ಲ. ತಾವು ಏನಾದರೂ ಮಾಡಬೇಕು, ತಾಯಿ!'

ಉಮಾದೇವಿ ಆಳಿಗೆ 'ಹೋಗಿ ಮ್ಯಾನೇಜರ ಶ್ರೀನಿವಾಸರಾಯರನ್ನು ಕರೆದುಕೊಂಡು ಬಾ' ಎಂದಳು

ಆತನು ಹೋಗಿ, ಚಪ್ಪರವನ್ನು ಸಿದ್ಧಗೊಳಿಸುತ್ತಿದ್ದ ಶ್ರೀನಿವಾಸ ರಾಯರನ್ನು ಕರೆದುಕೊಂಡು ಬಂದನು.

'ಕೆಲಸವೆಲ್ಲಾ ಪೂರೈಸಿತಾ?' ಎಂದು ಉಮಾದೇವಿ ಮ್ಯಾನೇಜರನ್ನು ಕೇಳಿದಳು.

'ಆಯ್ತು ತಾಯಿ. ಚಪ್ಪರದ ಮೂರು ಕಡೆಗಳಲ್ಲಿಯೂ ಹೂ-ಕುಂಡೆ ಗಳನ್ನಿಟ್ಟರೆ ಮುಗಿದ ಹಾಗೆಯೇ.'

'ಇವರ ಊರ ಸಮಾಚಾರ ಕೇಳಿದಿರಾ?' ಎಂದು ಹುಲಿಯ ಹಾವಳಿ ಯನ್ನು ವಿವರಿಸಿ, 'ಆ ಎತ್ತನ್ನು ಕೊಂದು ಹಾಕಿರುವ ಸ್ಥಳ ಎಷ್ಟು ದೂರ ಇದೆ?' ಎಂದು ಬಂದಿದ್ದ ಮುಖಂಡನನ್ನು ಉಮಾದೇವಿ ಕೇಳಿದಳು.

'ದೊಡ್ಡ ಕೆರೆಯ ಕೆಳಗಿರುವ ನೇರಳೆ ಮರದ ಕೆಳಗೆ, ತಾಯಿ!' ಎಂದು ಮುಖಂಡ ಹೇಳಿದನು.

'ಎಲ್ಲಿದೆ ದೊಡ್ಡ ಕೆರೆ?'

'ರೈಲ್ವೆ ಸ್ಟೇಷನ್‌ಗೆ ಹೋಗುವ ರಸ್ತೆಯಲ್ಲಿ. ಇಲ್ಲಿಂದ ಮೂರುವರೆ ಮೈಲಿಯಾಗುತ್ತೆ, ಅಮ್ಮ!' ಎಂದು ಶ್ರೀನಿವಾಸರಾಯರು ಹೇಳಿದರು.

'ಯಾವ ದಿಕ್ಕಿನಿಂದ ಹುಲಿ ಬರುತ್ತೆ?' ಎಂದು ಉಮಾದೇವಿ ಮುಖಂಡ ನನ್ನು ಕೇಳಿದಳು.

'ಪಶ್ಚಿಮದ ಕಡೆ ಕೆರೆ ಇದೆ. ದಕ್ಷಿಣದ ಕಡೆ ನೀರು ತುಂಬಿರುವ ಗದ್ದೆಗಳು

ಇವೆ. ಬಂದರೆ ಪೂರ್ವ ಇಲ್ಲವೆ ಉತ್ತರದ ಕಡೆಯಿಂದ ಬರಬೇಕು ' ಎಂದು ಶ್ರೀನಿವಾಸರಾಯರು ಹೇಳಿದರು.

' ಉತ್ತರದಿಂದ ಅದು ನಿನ್ನೆ ಬಂದಿತು, ಅಮ್ಮಣ್ಣಿ ! ' ಎಂದು ಗುಂಪಿನಲ್ಲಿದ್ದ ಮುನೇಶಿಗ ಹೇಳಿದ.

' ನನ್ನೊಡನೆ ಅಲ್ಲಿಗೆ ಬರುತ್ತೀರಾ ? ಇವರಿಗೆ ಸ್ವಲ್ಪ ಸಹಾಯ ಮಾಡೋಣ ' ಎಂದು ಉಮಾದೇವಿ ಶ್ರೀನಿವಾಸರಾಯರಿಗೆ ಹೇಳಿದಳು.

' ಆಗಲಿ ತಾಯಿ. '

' ನಾವು ಸಂಜೆ ಐದು ಗಂಟೆ ವೇಳೆಗೆ ಬರುತ್ತೇವೆ. ಅಷ್ಟರ ವೇಳೆಗೆ ಎತ್ತು ಬಿದ್ದಿರುವ, ಅಂದರೆ ದಕ್ಷಿಣದ ಕಡೆ—ಹುಲಿ ಬರುವ ದಾರಿಗೆ ಎದುರಾಗಿ ಎತ್ತಿನಿಂದ ನೂರು ಗಜಗಳ ದೂರದಲ್ಲಿ ಕೊಪ್ಪರಿಗೆ ಹಿಡಿಯುವಷ್ಟು ಒಂದು ದೊಡ್ಡ ಹಳ್ಳ ತೋಡಿ. ಅದರಲ್ಲಿ ಮೂರು ಕುರ್ಚಿಗಳನ್ನಿಟ್ಟು, ಒಂದು ಕೊಪ್ಪರಿಗೆಯನ್ನು ತಂದಿಡಿ. ತಮ್ಮಟೆ, ಕಹಳೆ, ನಗಾರಿಗಳೊಡನೆಯೂ ಜನ ಒಂದಿರಲಿ ' ಎಂದು ಉಮಾದೇವಿ ಹೇಳಿದಳು.

' ಆಗಲಿ, ತಾಯಿ ! ' ಎಂದು ಎಲ್ಲರೂ ಹೇಳಿ ಹೊರಟು ಹೋದರು.

* * * *

ಸಂಜೆ ಸುಮಾರು ನಾಲ್ಕು ಗಂಟೆಯ ವೇಳೆಗೆ ಜಮೀನ್‌ದಾರರ ವಿಕ್ಟೋರಿಯಾ ಗಾಡಿಯು ಹೆಬ್ಬಾಗಿಲ ಮುಂದೆ ಸಿದ್ಧವಾಗಿ ನಿಂತಿದ್ದಿತು. ಉಮಾದೇವಿ, ಅವಳ ಗೆಳತಿ ರಮಾ, ಮ್ಯಾನೇಜರ್ ಶ್ರೀನಿವಾಸರಾಯರು ಅದರಲ್ಲಿ ಬಂದು ಕುಳಿತರು. ಉಮಾದೇವಿಯ ಕೈಯ್ಯಲ್ಲಿ ಒಂದು ರಿವಾಲ್ವರಿತ್ತು. ಆಕೆಯ ಕೆಲಸಗಾರನೊಬ್ಬನು ಎರಡು ಬ್ಯಾಟರಿಗಳನ್ನೂ, ಆರು ವಿದ್ಯುದ್ದೀಪಗಳನ್ನೊಳಗೊಂಡ ಉದ್ದವಾದ ವಿದ್ಯುತ್ತಂತಿಯನ್ನೂ, ಎರಡು ವಿದ್ಯುದ್ದೀಪಗಳನ್ನೊಳಗೊಂಡ ಮತ್ತೊಂದು ತಂತಿಯನ್ನೂ, ಮದ್ದು ಗುಂಡುಗಳನ್ನು ತುಂಬಿದ ಎರಡು ಎರಡೇಟಿನ ಬಂದೂಕುಗಳನ್ನೂ ತಂದು, ಗಾಡಿಯಲ್ಲಿಟ್ಟು, ತಾನು ಗಾಡಿಯವನ ಪಕ್ಕದಲ್ಲಿ ಕುಳಿತನು. ಗಾಡಿ ಹೊರಟಿತು.

ನೇರಿಳೆ ಮರದ ಕೆಳಗೆ ವಿಕ್ಟೋರಿಯಾ ಗಾಡಿಯು ಬಂದು ನಿಂತಿತು. ಅಲ್ಲಿ ಕಾದಿದ್ದ ಹಳ್ಳಿಯವರೆಲ್ಲಾ ಗಾಡಿಯ ಸುತ್ತಮುತ್ತಲೂ ನಿಂತರು. ಉಮಾದೇವಿ, ಎಲ್ಲರೂ ಗಾಡಿಯಿಂದಿಳಿದರು. ಸತ್ತ ಎತ್ತನ್ನು ನೋಡಿ

ಉಮಾ ಕಣ್ಣೀರು ಸುರಿಸಿದಳು. 'ಯಾರದು ಎತ್ತು?' ಎಂದು ಕೇಳಿದಳು.

'ನನ್ನದು ತಾಯಿ. ನಾನು ಹಾಳಾಗಿ ಹೋದೆ. ಅದೇ ನನ್ನ ಜೀವ ವೆಲ್ಲಾ ಆಗಿತ್ತು.' ಎಂದು ಮುನೇಶಿಗನು ಹೇಳಿದನು.

'ಬೇರೆ ಒಂದು ಎತ್ತನ್ನು ಕೊಂಡುಕೋ' ಎಂದು ಉಮಾದೇವಿ ಶ್ರೀನಿವಾಸರಾಯರ ಕೈಯಲ್ಲಿ ಕೊಟ್ಟಿದ್ದ ತನ್ನ ಹಣದ ಚೀಲವನ್ನು ತೆಗೆದುಕೊಂಡು ಅದರಿಂದ ಐವತ್ತು ರೂಪಾಯಿಗಳನ್ನು ತೆಗೆದು ಮುನೇಶಿಗನಿಗೆ ಕೊಟ್ಟು, ಚೀಲವನ್ನು ಪುನಃ ಶ್ರೀನಿವಾಸರಾಯರ ಕೈಗೆ ಕೊಟ್ಟಳು. ಜನರೆಲ್ಲಾ ಮುನೇಶಿಗನ ಕಡೆಗೂ, ಉಮಾದೇವಿಯ ಕಡೆಗೂ ಆಶ್ಚರ್ಯದಿಂದ ನೋಡಿದರು.

ಉಮಾದೇವಿ, ಕೊಪ್ಪರಿಗೆ ಹಿಡಿಸಲು ಮಾಡಿದ್ದ ಆಳವಾದ ಹಳ್ಳವನ್ನೂ ಎತ್ತು ಬಿದ್ದಿದ್ದ ಕಡೆಗೆ ಭೂಮಿಯ ಮಟ್ಟಕ್ಕೆ ಮಾಡಿದ್ದ ಬಂದೂಕುಗಳು ಹಿಡಿಸಲು, ಗಾಳಿ ಬರಲು, ಮಾಡಿದ್ದ ರಂಧ್ರಗಳನ್ನೂ ಬಂದೂಕುಗಳನ್ನಿಡುವ ಕಡೆ ಮಟ್ಟಸಾಗಿ ಹಾಕಿದ್ದ ಮೂರು ಕುರ್ಚಿಗಳನ್ನೂ ನೋಡಿ, 'ಇವರಿಗೂ ಬೇಟೆಯ ವಿಚಾರವೆಲ್ಲಾ ಚೆನ್ನಾಗಿ ಗೊತ್ತಿದೆ!' ಎಂದು ಶ್ರೀನಿವಾಸರಾಯರಿಗೆ ಹೇಳಿದಳು.

'ಹೌದು ತಾಯಿ. ನಮ್ಮ ರಾಮೇಗೌಡ ಒಳ್ಳೆ ಬೇಟೆಗಾರ. ಆದರೆ ಈ ಹುಲೀನ ಹೊಡೆಯೋಕೆ ಅವನ ಒಂದೇಟಿನ ತುಪಾಕಿ ಸಾಲದೆಂದು ಹೆದರಿದ. ಅವ ಹೇಳಿದ ಮೇಲೆಯೇ ನಿಮ್ಮ ಹತ್ತಿರ ಓಡಿ ಬಂದೆವಮ್ಮಾ' ಎಂದು ಮುದುಕ ಮುಖಂಡ ಹೇಳಿದನು.

ಮಾಡಿದ್ದ ಹಳ್ಳದ ಬಳಿ ಹಾಕಿದ್ದ ಮಣ್ಣನ್ನು ದೂರದ ಹಳ್ಳಕ್ಕೆ ಸಾಗಿಸ ಹೇಳಿ, ಆ ಹಳ್ಳದಲ್ಲಿ ತಂದಿದ್ದ ಎರಡು ಬ್ಯಾಟರಿಗಳನ್ನೂ ಇಟ್ಟು, ಹಳ್ಳದೊಳಗೆ ಎರಡು ವಿದ್ಯುದ್ದೀಪಗಳು ಇರುವಂತೆಯೂ, ಸತ್ತಿರುವ ಎತ್ತಿಗೆ ಸರಿಯಾಗಿ ಮೇಲಕ್ಕಿರುವ ಕೊಂಬೆಯಿಂದ ಆರು ವಿದ್ಯುದ್ದೀಪಗಳನ್ನು ತೂಗು ಬಿಡುವಂತೆಯೂ ಉಮಾದೇವಿ ಹೇಳಿದಳು. ಆಳು ಮರದ ಮೇಲೆ ಕೊಂಬೆಯಿಂದ ತೂಗು ಬಿಟ್ಟ ವಿದ್ಯುದ್ದೀಪಗಳನ್ನು, ಹಳ್ಳದಲ್ಲಿದ್ದ ಬ್ಯಾಟರಿಗಳಿಗೆ ನೆಲದಲ್ಲಿ ಹೂಳಲ್ಪಟ್ಟಿದ್ದ ಕೊಳವೆಗಳಲ್ಲಿ ಹೋದ ತಂತಿಯನ್ನು ಮರಕ್ಕೆ ಸುತ್ತಿ ಸೇರಿಸಿದನು. ಆ ದೀಪಗಳಿಗೆ ಸ್ವಿಚ್ಚನ್ನು ಬಲಗಡೆಯ ಕೊನೆಯ ಕುರ್ಚಿಯ ಬಳಿ

ಇಟ್ಟನು. ಹಳ್ಳದೊಳಗಿದ್ದ ವಿದ್ಯುದ್ದೀಪಗಳ ಸುತ್ತಲೂ ಕಪ್ಪು ಬಟ್ಟೆಯನ್ನು ಸುತ್ತಿ, ಬೆಳಕು ಸುತ್ತಲೂ ಹೋಗದೆ ಕೆಳಗೆ ಮಾತ್ರ ಬೀಳುವಂತೆ ಮಾಡಿದನು.

ಸೂರ್ಯನು ಮುಳುಗಿದನು. ಉಮಾ, ರಮಾ, ಶ್ರೀನಿವಾಸರಾಯರು ಹಳ್ಳದಲ್ಲಿದ್ದ ಕುರ್ಚಿಗಳ ಮೇಲೆ ಕುಳಿತರು. ಆಗ ಉಮಾದೇವಿಯು, 'ಮೊದಲು ಬಂದೂಕಿನಿಂದ ನಾಲ್ಕು ಏಟು ಹುಲಿಯ ಕಡೆಗೆ ಹೊಡೆಯುತ್ತೇನೆ. ಕಾಲು ಗಂಟೆಯಾದ ಮೇಲೆ ರಿವಾಲ್ವರಿನಿಂದ ಧ್ವನಿ ಮಾಡಿಸುತ್ತೇನೆ. ಆಗ ನೀವುಗಳು ತಮಟೆ, ನಗಾರಿ, ಕೊಂಬು, ಕಹಳೆ ಎಲ್ಲಾ ಧ್ವನಿ ಮಾಡುತ್ತ ಬಂದು ಹುಲಿ ಬದುಕಿದ್ದರೆ ಅದನ್ನು ಓಡಿಸಿ; ಸತ್ತಿದ್ದರೆ ಸರಿಯೇ ಆಯ್ತು. ಈ ಹಳ್ಳದ ಮೇಲೆ ಬೋರಲಾಗಿ ಕೊಪ್ಪರಿಗೆಯನ್ನು ಮುಚ್ಚಿ, ಆ ಕೊಪ್ಪರಿಗೆಯ ಮೇಲೆ ಚಪ್ಪಟೆಯಾದ ಎರಡು ಕಲ್ಲು-ಚಪ್ಪಡಿಗಳನ್ನಿಡಿ. ಸುತ್ತಲೂ ಭದ್ರವಾಗಿ ಮಣ್ಣಿನಿಂದ ಮುಚ್ಚಿ' ಎಂದು ಹೇಳಿದಳು.

'ಆಗಲಿ ತಾಯಿ!' ಎಂದು ಮುಖಂಡನು ಹೇಳಿದನು.

ಉಮಾದೇವಿ ಹೇಳಿದಂತೆಯೇ ರೈತರು ಹಳ್ಳದ ಮೇಲೆ ಕೊಪ್ಪರಿಗೆಯನ್ನು ಮುಚ್ಚಿ, ಅದರ ಮೇಲೆ ಕಲ್ಲು-ಚಪ್ಪಡಿಗಳನ್ನೆಳೆದು ದೂರದಲ್ಲಿರುವ ಮರಗಳ ಮರೆಯಲ್ಲಿ ಬಚ್ಚಿಟ್ಟುಕೊಳ್ಳಲು ಹೋದರು.

ಉಮಾ ಎರಡು ತುಪಾಕಿಗಳ ಮೂತಿಗಳನ್ನು ಎರಡು ರಂಧ್ರಗಳಲ್ಲಿಟ್ಟು, ಹುಲಿ ಬರುವುದನ್ನು ನೆಟ್ಟ ದೃಷ್ಟಿಯಿಂದ ರಂಧ್ರದ ಮೂಲಕ ನೋಡುತ್ತಿದ್ದಳು. ರಮಾ ಶ್ರೀನಿವಾಸರಾಯರೂ ಹುಲಿ ಬರುವುದನ್ನೇ ನಿರೀಕ್ಷಿಸುತ್ತಿದ್ದರು.

ರಾತ್ರಿ ಕತ್ತಲು ತನ್ನ ಪ್ರಭಾವವನ್ನು ಎಲ್ಲಾ ಕಡೆಯಲ್ಲಿಯೂ ಬೀರಿತ್ತು. ಹುಲಿಯು ನೆಟ್ಟಗೆ ಮುಂದೆ ನುಗ್ಗುವ ಸಿಪಾಯಿಯಂತೆ ಧೈರ್ಯದಿಂದ ನೇರಳೆ ಮರದ ಕೆಳಗೆ ಸತ್ತಿದ್ದ ಎತ್ತಿರುವ ಕಡೆಗೆ ಬರುತ್ತಿತ್ತು. ಅದರ ಕಣ್ಣುಗಳು ಎರಡು ವಿದ್ಯುದ್ದೀಪಗಳಂತೆ ಹೊಳೆಯುತ್ತಿದ್ದುವು.

ಹುಲಿಯು, ಬಂದೊಡನೆಯೇ ಎತ್ತನ್ನು ತನ್ನ ಹಲ್ಲುಗಳಿಂದ ಕಚ್ಚಿಕೊಂಡಿತು. ಆಗ ಉಮಾ ಮರದಿಂದ ನೇತು ಹಾಕಿದ್ದ ವಿದ್ಯುದ್ದೀಪಗಳ ಸ್ವಿಚ್ಚನ್ನು ಹಾಕಿದಳು. ಮರದ ಮೇಲಿದ್ದ ದೀಪಗಳು ತಟ್ಟನೆ ಹತ್ತಿಕೊಂಡವು. ಆಶ್ಚರ್ಯದಿಂದ ಹುಲಿಯು ತಾನು ಕಚ್ಚಿಕೊಂಡಿದ್ದ ಎತ್ತನ್ನು ಮೇಲಕ್ಕೆತ್ತಿ ದೀಪಗಳ

ಕಡೆ ನೋಡಿತು. ' ಢಂ ! ' ಎಂದು ಬಂದೂಕವು ಶಬ್ದ ಮಾಡಿತು. ಏಟು ಸರಿಯಾಗಿ ಹುಲಿಯು ಮೇಲಕ್ಕೆತ್ತಿದ್ದ ಕತ್ತಿಗೆ ಬಿದ್ದಿತು. ಕಚ್ಚಿಕೊಂಡಿದ್ದ ಎತ್ತನ್ನು ಕೆಳಕ್ಕೆ ಬಿಟ್ಟು, ಮರದ ಮೇಲಿದ್ದ ಬೆಳಕಿನ ಕಡೆ ಅದು ಹಾರಿತು. ಅದು ಕೆಳಗೆ ಬೀಳುವುದರೊಳಗಾಗಿ 'ಢಂ' ಎಂದು ಬಂದೂಕದ ಮತ್ತೊಂದು ಏಟು ಹುಲಿಯ ಹೊಟ್ಟೆಗೆ ತಗಲಿತು. ಹುಲಿಯು ನೆಲದ ಮೇಲೆ ಬಿದ್ದು ಹೊರಳಾಡಿತು ಉಮಾ ತುಪಾಕಿಯನ್ನು ಮತ್ತೆರಡು ಸಲವೂ ಹುಲಿಯ ಕಡೆ ಗುರಿಯಿಟ್ಟು ಹೊಡೆದಳು. ಎರಡು ತುಪಾಕಿಗಳಿಂದ ಬಂದ ನಾಲ್ಕು ಏಟುಗಳೂ ಹುಲಿಗೆ ತಗಲಿದುವು. ಹುಲಿ ಮೊದಲೆರಡು ಏಟುಗಳಿಗೇ ಕೆಳಗೆ ಬಿದ್ದಿದ್ದಿತು.

ಉಮಾ ತನ್ನ ಕೈಗಡಿಯಾರದ ಕಡೆ ನೋಡುತ್ತಾ ಕಾಲು ಗಂಟೆ ಯನ್ನು ಕಾಲು ದಿನದಂತೆ ಕಳೆದಳು. ಮರದ ಮೇಲಿದ್ದ ವಿದ್ಯುದ್ದೀಪ ಗಳನ್ನು ಆರಿಸಿ ಹತ್ತಿಸಿದಳು. ಹುಲಿಯು ಕೆಳಗೆ ಹಾಗೆಯೇ ನೆಲದ ಮೇಲೆ ಮಲಗಿತ್ತು.

ಕಾಲು ಗಂಟೆಯಾಯಿತು. ಮರದ ಮೇಲಿದ್ದ ವಿದ್ಯುದ್ದೀಪಗಳು ಉರಿಯುತ್ತಿದ್ದುವು. ಉಮಾ ರಿವಾಲ್ವರನ್ನು ಒಮ್ಮೆ ಧ್ವನಿ ಮಾಡಿದಳು. ದೂರದಲ್ಲಿದ್ದ ಮರಗಳ ಸಾಲಿನಿಂದ ತಮ್ಮಟೆ, ನಗಾರಿ, ಕಹಳೆಗಳ ಗದ್ದಲವು ಉರಿಯುತ್ತಿದ್ದ ಪಂಜುಗಳೊಡನೆ ನೇರಿಳೆ ಮರದ ಕಡೆಗೆ ಬಂದಿತು.

ನೇರಿಳೆ ಮರದ ಹತ್ತಿರ ಬಂದೊಡನೆಯೇ ಗದ್ದಲವು ಇನ್ನೂ ಹೆಚ್ಚು ಆಯಿತು. ಕೈಗಳಲ್ಲಿ ದೊಣ್ಣೆ ಹಿಡಿದಿದ್ದ ಕೆಲವು ಬೇಟೆಗಾರರು ತಮ್ಮ ಎಲ್ಲಾ ಧೈರ್ಯದಿಂದಲೂ ಹುಲಿ ಬಿದ್ದಿದ್ದ ಕಡೆಗೆ ನಿದಾನ ಹೆಜ್ಜೆ ಇಡುತ್ತಾ ಬಂದರು ಹುಲಿಯು ಕಣ್ಣು ಮುಚ್ಚಿಕೊಂಡು ಈ ಎಲ್ಲಾ ಗದ್ದಲದಿಂದಲೂ ಸುಮ್ಮ ಗಿದ್ದುದನ್ನೂ, ಅದರ ಕತ್ತು ಮತ್ತು ಹೊಟ್ಟೆಯ ಮೇಲಿದ್ದ ಗುಂಡಿನೇಟು ಗಳನ್ನೂ, ಅದರ ಬಳಿಯಲ್ಲಿ ಬಿದ್ದಿದ್ದ ಸತ್ತ ಎತ್ತನ್ನೂ ನೋಡಿ, ಹುಲಿ ಸತ್ತಿದೆ. ಎಂದು ನಿರ್ಧರಿಸಿ, ಇನ್ನೂ ಹತ್ತಿರ ಬಂದು ನೋಡಿದರು. ಹುಲಿ ಸತ್ತಿತ್ತು

' ಹೋ ! ಹುಲಿ ಸತ್ತಿದೆ !! ' ಎಂದು ಅವರು ಕೂಗಿದರು.

ಎಲ್ಲರೂ ಬಂದು ಕೊಪ್ಪರಿಗೆಯ ಮೇಲಿದ್ದ ಕಲ್ಲು-ಚಪ್ಪಡಿಗಳನ್ನು ತೆಗೆದು, ಕೊಪ್ಪರಿಗೆಯನ್ನು ತೆಗೆದು ಪಕ್ಕದ ನೆಲದ ಮೇಲಿಟ್ಟರು.

ರಾಗಿಯ ಹಗೇವಿನಲ್ಲಿ ಇಳಿದು ಬೆವರಿನಿಂದ ಮೇಲೆ ಬಂದು ಗಾಳಿಗಾಗಿ ಹಂಬಲಿಸುವ ರೈತರಂತೆ ಹಳ್ಳದಲ್ಲಿದ್ದವರು ಹಳ್ಳದ ಮೇಲುಗಡೆ ನೆಲದ ಮೇಲೆ ಬಂದೊಡನೆಯೇ ಜೋರಾಗಿ ಉಸಿರು ತೆಗೆದುಕೊಂಡರು. ಉಮಾದೇವಿ ನೆಟ್ಟಗೆ ಹುಲಿಯ ಹತ್ತಿರ ಹೋದಳು. ಮರದ ಮೇಲೆ ಬೆಳಗುತ್ತಿದ್ದ ದೀಪಗಳ ಸಹಾಯದಿಂದ ಹುಲಿಯನ್ನು ನೋಡಿದಳು. ತನ್ನ ತುಪಾಕಿಯ ನಾಲ್ಕು ಏಟುಗಳೂ ಅದಕ್ಕೆ ಬಿದ್ದಿದ್ದುವು.

'ಇದನ್ನು ಏನು ಮಾಡುತ್ತೀರಿ?' ಎಂದು ಹಳ್ಳಿಯವರ ಕಡೆ ತಿರುಗಿ ಉಮಾದೇವಿ ಕೇಳಿದಳು.

'ಗಾಡಿಯಲ್ಲಿ ಇದನ್ನು ಹಾಕಿ, ಪೇಟೆಯಲ್ಲಿ ರಾತ್ರಿ ಎಲ್ಲಾ ಮೆರವಣಿಗೆ ಮಾಡುತ್ತೇವೆ, ತಾಯಿ!' ಎಂದು ಅವರು ಹೇಳಿದರು.

ಉಮಾ, ಶ್ರೀನಿವಾಸರಾಯರ ಕಡೆ ನೋಡಿ, ರೈತರ ಮಾತಿಗೆ ನಕ್ಕಳು.

'ಮೆರವಣಿಗೆ ಮಾಡಿ ಸಂತೋಷಪಡಲಿ ಬಿಡಿ, ತಾಯಿ. ಬೆಳಗಾಗುವ ವೇಳೆಗೆ ಆ ಗಾಡಿಯನ್ನು ಕೋಟೆಯ ಬಾಗಿಲ ಹತ್ತಿರ ಬಿಡಲಿ. ಊರಿಗೆ ಬರುವ ಗವರ್ನರರವರೂ ನೋಡಲಿ.'

'ಒಳ್ಳೆ ಯೋಜನೆ!' ಎಂದು ರಮಾ ನಸುನಗೆಯಿಂದ ಉಮಾದೇವಿಯನ್ನು ನೋಡುತ್ತಾ ಹೇಳಿದಳು.

'ಇವೆಲ್ಲಾ ಹೀಗೆಯೇ ನಾಳೆ ಸಂಜೆ ವರೆಗೂ ಇರಬೇಕು. ನಾಳೆ ದೊಡ್ಡ ಇಂಗ್ಲಿಷ ದೊರೆ ಬೇಟೆಗೆ ಬರ್ತಾರೆ. ಅವರು ಇಲ್ಲಿಗೆ ಬಂದು ಇವನ್ನೆಲ್ಲಾ ನೋಡಿದರೂ ನೋಡಬಹುದು' ಎಂದು ಶ್ರೀನಿವಾಸರಾಯರು ಹೇಳಿದರು.

'ಇಷ್ಟೇವೆ ಬುದ್ಧಿ' ಎಂದು ರೈತರು ಒಂದೇ ದನಿಯಿಂದ ಮ್ಯಾನೇಜರಿಗೆ ಉತ್ತರವಿತ್ತರು.

ಉಮಾದೇವಿ ಶ್ರೀನಿವಾಸರಾಯರ ಬುದ್ಧಿಯನ್ನು ನೋಡಿ, ಮೆಚ್ಚಿನ ನಸುನಗೆಯನ್ನು ಮುಖದ ಮೇಲೆ ಸೂಸಿದಳು.

ವಿಕ್ಟೋರಿಯಾ ಗಾಡಿಯು ಮರದ ಕೆಳಗೆ ಬಂದು ನಿಂತಿತು. ಉಮಾದೇವಿ 'ಮರದ ಮೇಲಿದ್ದ ದೊಡ್ಡ ದೀಪಗಳನ್ನು ಆರಿಸಿ, ಸಣ್ಣ ದೀಪ

ವೊಂದು ಮಾತ್ರ ಹತ್ತಿಸು ' ಎಂದು ಆಳಿಗೆ ಹೇಳಿದಳು. ಆತ ಹಾಗೆಯೇ ಮಾಡಿದನು ಗಾಡಿಯಲ್ಲಿ ಬಂದಿದ್ದವರೆಲ್ಲಾ ಕುಳಿತರು. ಆಗ ಶ್ರೀನಿವಾಸ ರಾಯರು ಅಲ್ಲಿದ್ದ ನೀರಗಂಟಿ ಕಾಳನಿಗೆ ' ಈ ದೀಪಗಳೆಲ್ಲಾ ಹೀಗೇ ಇರಬೇಕು ನೀನು ಇನ್ನೊಂದಿಬ್ಬರು ನಾಳೆ ಸಂಜೆಯ ವರೆಗೂ ಇಲ್ಲೇ ಕಾದಿರಬೇಕು. ' ಎಂದು ಹೇಳಿದರು.

' ಆಗಲಿ ಬುದ್ಧಿ ' ಎಂದ ನೀರಗಂಟಿ ಕಾಳ. ಗಾಡಿಯು ಹೊರಟಿತು.

* * * *

ಬಾಳೆಯ ಕಂದುಗಳು, ಮಾವಿನ ತೋರಣ, ಹೂವಿನ ಹಾರಗಳಿಂದ ಅಲಂಕೃತವಾಗಿದ್ದ ಎರಡೆತ್ತಿನ ಗಾಡಿಯಲ್ಲಿ ಸತ್ತ ಹುಲಿಯನ್ನು ಪೇಟೆಯಲ್ಲಿ ಮೆರವಣಿಗೆ ಮಾಡಿದರು. ಅಲಂಕೃತವಾದ ಗಾಡಿಯ ಮುಂದಿದ್ದ, ಉರಿಯುತ್ತಿದ್ದ ಪೆಟ್ರೊಮ್ಯಾಕ್ಸ ದೀಪಗಳೂ, ತಮಟೆ, ನಗಾರಿಯ ಧ್ವನಿಯೂ ಊರವರೆಲ್ಲರೂ ಆ ನಡು-ರಾತ್ರಿಯಲ್ಲಿಯೂ ಎದ್ದು ಹುಲಿಯನ್ನು ನೋಡುವಂತೆ ಮಾಡಿದ್ದುವು.

ಗವರ್ನರವರ ಬರುವಿಕೆಗೆ ಅಲಂಕರಿಸಿದ್ದ ಊರು, ಈ ಮೆರವಣಿಗೆಯಿಂದ ಮೆರೆಯಿತು. ಈ ಮೆರವಣಿಗೆಯು, ಊರ ಜನರಿಗೆ ಆಶ್ಚರ್ಯ ಸಂತೋಷಗಳನ್ನುಂಟುಮಾಡಿ, ' ಉಮಾದೇವಿಯನ್ನು ಪಡೆದ ಈ ಊರಿನ ಪುಣ್ಯವೇ ಪುಣ್ಯ ! ' ಎಂದು ಎಲ್ಲರಿಂದಲೂ ಹೇಳಿಸಿತು.

ಸೂರ್ಯೋದಯದ ವೇಳೆಗೆ ಈ ಮೆರವಣಿಗೆಯು ಜಮೀನದಾರರ ಕೋಟೆಯ ಬಾಗಿಲು ಬಳಿ ಬಂದಿತು. ಹುಲಿಯಿದ್ದ ಗಾಡಿಯು ಬಾಗಿಲ ಮಗ್ಗಲಲ್ಲಿ ನಿಂತಿತು. ಗಾಡಿಗೆ ಕಟ್ಟಿದ್ದ ಎತ್ತುಗಳನ್ನು ಬಿಚ್ಚಿ, ಗವರ್ನರವರ ಅವಗಾಹನೆಗೆ ಗಾಡಿಯನ್ನು ಎಲ್ಲಾ ಅಲಂಕಾರದೊಡನೆಯೂ ಹಾಗೆಯೇ ಅಲ್ಲಿಯೇ ಬಿಟ್ಟರು.

—

೩

ಊರ ಮತ್ತು ಹೊರಗಿನ ಆಹ್ವಾನಿತರೆಲ್ಲಾ ಚಪ್ಪರದ ಕೆಳಗೆ ಏರ್ಪಾಡಿಸಿದ್ದ ಕುರ್ಚಿಗಳ ಮೇಲೆ ಕುಳಿತಿದ್ದರು. ಜಯರಾಜನೊಡನೆ ಗವರ್ನರರೂ, ಅವರ ಪತ್ನಿಯವರೂ ತಮ್ಮ ಪರಿವಾರದವರೆಲ್ಲರೊಡನೆ ಊರನ್ನೆಲ್ಲಾ ನೋಡಿಕೊಂಡು ಕೋಟೆಯ ಹೆಬ್ಬಾಗಿಲಿನ ಬಳಿ ಬಂದರು. ಮ್ಯಾನೇಜರ್ ಶ್ರೀನಿವಾಸರಾಯರೂ, ಉಮಾದೇವಿಯವರೂ ಮತ್ತು ಜಯರಾಜರೂ ಅವರನ್ನು ಸ್ವಾಗತಿಸಿದರು. ಜಯರಾಜ್, ಗವರ್ನರವರಿಗೂ ಅವರ ಪತ್ನಿಯವರಿಗೂ ಶ್ರೀನಿವಾಸರಾಯರ ಮತ್ತು ಉಮಾದೇವಿಯ ಪರಿಚಯವನ್ನು ಮಾಡಿಕೊಟ್ಟನು. ಆಗಲೇ ಗವರ್ನರವರ ಕಣ್ಣು ಗಾಡಿಯಲ್ಲಿದ್ದ ಹುಲಿಯ ಕಡೆಗೆ ಹೋಗಿ, 'ಬಹು ದೊಡ್ಡ ಹುಲಿ! ಇಷ್ಟು ದೊಡ್ಡ ಹುಲಿಯನ್ನು ನಾನು ಇದುವರೆಗೂ ನೋಡಿಯೇ ಇಲ್ಲ!!' ಎಂದರು.

'ಹೌದು; ನಾನೂ ಇಷ್ಟು ದೊಡ್ಡ ಹುಲಿಯನ್ನು ನೋಡಿಲ್ಲ!' ಎಂದು ಗವರ್ನರವರ ಪತ್ನಿಯು ಪತಿಯೊಡನೆ ಸಮ್ಮತಿಸಿ ನುಡಿದರು.

'ಈ ಊರ ಬಳಿ ಇರುವ ಹಳ್ಳಿಗಳ ಜನರಿಗೆಲ್ಲಾ ಇದು ಬಹಳ ಕಷ್ಟ ಕೊಡುತ್ತಿತ್ತು. ನಿನ್ನೆ ರಾತ್ರಿ ಉಮಾದೇವಿ ಇದನ್ನು ತುಪಾಕಿಯಿಂದ ಹೊಡೆದು ಕೊಂದರು!' ಎಂದು ಮ್ಯಾನೇಜರ್ ಶ್ರೀನಿವಾಸರಾಯರು ಹೇಳಿದರು.

'ಒಳ್ಳೆ ಬೇಟೆಗಾತಿ!' ಎಂದು ಗವರ್ನರವರೂ ಅವರ ಹೆಂಡತಿಯೂ ಉಮಾದೇವಿಯ ಕಡೆ ನೋಡಿದರು. ಜಯರಾಜ್ ಗಾಡಿಯಲ್ಲಿದ್ದ ಹುಲಿಯ ಕಡೆಗೊಮ್ಮೆ ನೋಡಿ, ತನ್ನ ಸಹಧರ್ಮಿಣಿಯ ಕಡೆ ನೋಡಿ, ಮುಖದಲ್ಲಿ ಮುಗುಳು ನಗೆಯನ್ನು ಸೂಸಿದನು.

ಅಂದು ಉಮಾದೇವಿ ನೀಲಿಯ ಪೀತಾಂಬರವನ್ನುಟ್ಟು ತಿಳಿ-ನೀಲಿಯ ಜಾಕೆಟ್ಟನ್ನು ತೊಟ್ಟಿದ್ದಳು. ಕಿವಿಯಲ್ಲಿನ ಆಂದೋಳಿಸುತ್ತಿದ್ದ ಲೋಲಾಕುಗಳೂ, ತಲೆಯಲ್ಲಿ ಮುಡಿದಿದ್ದ ನೀಲಿಯ ಹೂವಿನ ದಂಡೆಯೂ ಭೂಮಿಯ ಮೇಲೆ ಬಿದ್ದೇವೆ ಎನ್ನುವಂತಿದ್ದುವು. ಎತ್ತರದ ಹಿಮ್ಮಡಿಯ ಸ್ಲಿಪ್ಪರುಗಳನ್ನು ಧರಿಸಿದ್ದಳು. ಅವಳ ಸೀರೆಯ ಸೆರಗಿಗೆ ಸಿಕ್ಕಿಸಿದ್ದ ರತ್ನಖಚಿತವಾದ

ಸೀರೆಯ ಸೂಜಿಗೆ ಅವಳು ವಿಶ್ವವಿದ್ಯಾನಿಲಯದಿಂದ ಗಳಿಸಿದ್ದ ಸ್ವರ್ಣ-ಪದಕವು ತೂಗುಹಾಕಲ್ಪಟ್ಟಿದ್ದಿತು.

'ನನ್ನ ವಿಶ್ವವಿದ್ಯಾನಿಲಯದ ಪದಕ!' ಎಂದು ಗವರ್ನರವರು ಉಷಾದೇವಿಯ ಸ್ವರ್ಣಪದಕವನ್ನು ನೋಡಿ ಹೇಳಿದರು.

'ಹೌದು; ಅರ್ಥಶಾಸ್ತ್ರದಲ್ಲಿ ಬಿ. ಎ. ನಲ್ಲಿ, ಮೊದಲನೆಯ ಸ್ಥಾನವನ್ನು ಪಡೆದುದಕ್ಕಾಗಿ ಪದವೀದಾನ ಮಹೋತ್ಸವದಲ್ಲಿ ತಮ್ಮ ಅಮೃತ ಹಸ್ತದಿಂದ ದಯಪಾಲಿಸಿದ ಪದಕ' ಎಂದು ಉಷಾದೇವಿ ನಸುನಗೆಯಿಂದ ನುಡಿದಳು.

'ಬಹಳ ಸಂತೋಷ!'

'ಇವರು ಜಮೀನ್‍ದಾರರನ್ನು ವಿವಾಹವಾದ ಮೇಲೆ ಜಮೀನ್‍ದಾರಿಯೇ ಭಾಗ್ಯ ಶೃಂಗಾರಗಳಿಂದ ಕೂಡಿದೆ' ಎಂದು ಮುದುಕ ಮ್ಯಾನೇಜರ್ ಶ್ರೀನಿವಾಸರಾಯರು ಗವರ್ನರವರಿಗೆ ಹೇಳಿದರು.

'ನೋಡಿದರೆ ಹಾಗೆಯೇ ಇದೆ. ಇಂತಹ ಸೊಗಸಾದ ಏರ್ಪಾಡುಗಳುಳ್ಳ, ಜನ ಸುಖವಾಗಿರುವ ಜಮೀನ್‍ದಾರಿಯನ್ನು ನನ್ನ ಆಧಿಪತ್ಯದಲ್ಲಿಯೇ ನೋಡಲಿಲ್ಲ! ಉಷಾದೇವಿಯ ಕೈ ಹಿಡಿದ ನೀವು ಪುಣ್ಯವಂತರು ಮಿಸ್ಟರ್ ಜಯರಾಜ್!' ಎಂದು ಮಗಳ ಗುಣಗಳನ್ನು ಹೆಚ್ಚಿ ಹುರುಪಿನಿಂದ ವಿವರಿಸುವ ತಂದೆಯಂತೆ ಗವರ್ನರವರು ಹೇಳಿದರು.

'ನನ್ನ ಭಾಗ್ಯ!' ಎಂದು ಜಯರಾಜ್ ನಸುನಗೆಯಿಂದ ಉತ್ತರವಿತ್ತನು.

'ಹೋಗುವಲ್ಲಿ ಹುಲಿ-ಶಿಕಾರಿಗೆ ಉಷಾದೇವಿ ಮಾಡಿದ್ದ ಏರ್ಪಾಡುಗಳನ್ನು ನಾವು ನೋಡಬಹುದೇ?' ಎಂದು ಗವರ್ನರವರ ಪತ್ನಿಯು ಕೇಳಿದರು.

'ಆಗಬಹುದು' ಎಂದಳು ಉಷಾದೇವಿ.

'ಈ ಹುಲಿಯನ್ನು ನಮಗೆ ಕೊಡಲು ಏನೂ ಅಭ್ಯಂತರವಿಲ್ಲವಲ್ಲಾ? ನಿಮ್ಮ ನೆನಪು ನಮ್ಮ ಮನೆಯಲ್ಲಿ ಸದಾ ಇರುತ್ತೆ' ಎಂದು ಗವರ್ನರವರ ಪತ್ನಿಯು ಕೇಳಿದರು.

'ತಾವು ಇದನ್ನು ಸ್ವೀಕರಿಸಿದರೆ ನಮ್ಮ ಭಾಗ್ಯ!' ಎಂದು ಉಮಾ ದೇವಿ ಉತ್ತರವಿತ್ತಳು.

ಉಮಾದೇವಿಯು ಕೈ ಹಿಡಿದುಕೊಂಡು ಗವರ್ನರವರ ಹೆಂಡತಿಯು ಮುಂದೆ ನಡೆದರು. ಜಯರಾಜ್, ಗವರ್ನರು ಮತ್ತು ಮಿಕ್ಕವರು ಅವರು ನಡೆದು ಹೋದ ದಾರಿಯಲ್ಲಿಯೇ ನಡೆದರು.

ಕುದುರೆಯ ಓಟದ ದಾರಿಯನ್ನೂ, ಅದರ ಪಕ್ಕದಲ್ಲಿದ್ದ ಹಸುರನ್ನೂ, ಈಜುವ ಮತ್ತು ತಾವರೆಯಿಂದ ಶೋಭಿಸುತ್ತಿದ್ದ ಕೊಳವನ್ನೂ, ಉದ್ಯಾನ ವನ್ನೂ ನೋಡಿ, 'ಜಮೀನ್‌ದಾರ ದಂಪತಿಗಳು ಪ್ರಕೃತಿಯ ಪ್ರಿಯರು!' ಎಂದು ಗವರ್ನರವರು ತಮ್ಮ ಹೆಂಡತಿಗೆ ತಿಳಿಸಿದರು.

'ಹೌದು; ಇಲ್ಲಿ ಪ್ರತಿಯೊಂದೂ ಮೊದಲನೆಯ ದರ್ಜೆಯವು!' ಎಂದು ಆಕೆ ಗವರ್ನರವರಿಗೆ ಹೇಳಿದರು.

ಇವರೆಲ್ಲರೂ, ಜನರಿಂದ ತುಂಬಿದ್ದ ಚಪ್ಪರದಲ್ಲಿ ಏರ್ಪಡಿಸಿದ್ದ ಪ್ಲಾಟ್-ಫಾರಂನ ಮೇಲೆ ಹಾಕಿದ್ದ ಸೋಫಾಗಳಲ್ಲಿ ಕುಳಿತರು ಅಂದಿನ ಕಾರ್ಯ-ಕಲಾಪಕ್ಕೆ ಆರಂಭವಾಯಿತು.

ಉಮಾದೇವಿಯ ಸೂಚನೆಯ ಮೇರೆಗೆ ಜಯರಾಜ್ ಗವರ್ನರವರ ಪತ್ನಿಯನ್ನು ಅಧ್ಯಕ್ಷಿಣಿಯಾಗಿ ಅಂದಿನ ಕಾರ್ಯ-ಕಲಾಪಗಳನ್ನು ನೆರವೇರಿಸಿ ಕೊಡಬೇಕೆಂದು ಪ್ರಾರ್ಥಿಸಿದನು. ಆಕೆ ಸಂತೋಷದಿಂದ ಒಪ್ಪಿದರು ಅವರ ಮುಂದೆ ಅಂದಿನ ಕಾರ್ಯದ ಮುದ್ರಿತವಾದ ಪಟ್ಟಿಯನ್ನು ಉಮಾ ದೇವಿ ಇಟ್ಟಳು.

ಪ್ರಾರ್ಥನೆಯಾಯಿತು. ಗವರ್ನರವರಿಗೆ ಒಪ್ಪಿಸಿದ ಜಮೀನ್‌ದಾರಿಯ ಜನದ ಪರದ ಮಾನಪತ್ರವನ್ನು ಉಮಾದೇವಿಯೇ ಓದಿದಳು. ಜಮೀನ್ ದಾರಿಯಲ್ಲಾದ ಕಾರ್ಯಗಳೆಲ್ಲಾ ಆ ಪತ್ರದಲ್ಲಿ ವಿವರಿಸಲ್ಪಟ್ಟಿದ್ದುವು. ಜಮೀನ್‌ದಾರಿಗೆ ಬೇಕಾದ ಬೇಡಿಕೆಗಳಲ್ಲಿ ಮುಖ್ಯವಾದುವು ರೈಲ್ವೆಸ್ಟೇಶನ್ ರಸ್ತೆಯನ್ನು ಸರಿಪಡಿಸುವುದೂ, ಊರಿಗೆ ಇರುವ ಬ್ರಾಂಚ್ ಪೋಸ್ಟ್ ಆಫೀಸನ್ನು ಟೆಲಿಗ್ರಾಂ ಎಲ್ಲಾ ಇರುವ ಸಬ್ ಪೋಸ್ಟಾಫೀಸ್ ಮಾಡುವುದೂ ಆಗಿದ್ದುವು. ಈ ಮಾನಪತ್ರವೂ ಕೂಡ ನೀಲಿಯ ಕಾಗದದ ಮೇಲೆ ಮುದ್ರಿತ ವಾಗಿ ರಜತ ಕರಂಡದಲ್ಲಿ ಗವರ್ನರವರಿಗೆ ಒಪ್ಪಿಸಲ್ಪಟ್ಟಿತು.

ಗವರ್ನರವರಿಗೆ ಚಮುಕಿಯ ಹಾರವನ್ನು ಜಯರಾಜ್ ಅರ್ಪಿಸಿದನು. ಅಧ್ಯಕ್ಷಿಣಿಯವರ ಕೊರಳಿಗೆ ನವರತ್ನದ ಹಾರವನ್ನು ಉಮಾದೇವಿ ಹಾಕಿದಳು.

'ಏನಿದು !' ಎಂದು ಆಕೆ ಹಾರದ ಕಡೆ ನೋಡಿ, ಉಮಾದೇವಿಯನ್ನು ನೆಟ್ಟ ದೃಷ್ಟಿಯಿಂದ ಈಕ್ಷಿಸಿದಳು.

'ಮಗಳ ಮನೆಗೆ ಬಂದ ತಾಯಿಗೆ ಉಡುಗರೆ' ಎಂದು ನಸುನಗೆಯಿಂದ ಉಮಾದೇವಿ ಹೇಳಿದಳು.

ಗವರ್ನರವರು ತಮ್ಮ ಭಾಷಣವನ್ನು ಪ್ರಾರಂಭಿಸಿದರು. ತಾವು ಜಮೀನ್‌ದಾರಿಯಲ್ಲಿನ ನೀರು, ರಸ್ತೆ, ನಲ್ಲಿ, ದೀಪಗಳ ವ್ಯವಸ್ಥೆಯನ್ನು ಮೆಚ್ಚಿರುವುದನ್ನು ಸೂಚಿಸಿ, ಜಮೀನ್‌ದಾರಿಯಲ್ಲಿನ ಜನಗಳ ಬೇಡಿಕೆಗಳಿಗೆ ತಕ್ಷಣ ಗಮನ ಕೊಡುವುದಾಗಿ ಭರವಸೆ ಇತ್ತರು.

ಸುಪ್ರೀತರಾದ ಗವರ್ನರವರ ಪತ್ನಿ ಉಮಾದೇವಿಗೆ, 'ನೀವು ಜನಕ್ಕೆ ಮಾಡಿರುವ ಸಹಾಯಕ್ಕೆ ನಿಮಗೆ ಮೊದಲನೆಯ ವರ್ಗದ 'ಕೈಸರಿ ಹಿಂದ್' ಪದಕ ಕೊಡಲು ಹೇಳಬೇಕೆಂದಿದ್ದೇನೆ' ಎಂದು ನಸುನಗೆಯಿಂದ ಹೇಳಿದರು

'ನಿಮ್ಮ ವಿಶ್ವಾಸಕ್ಕೆ ನಾನು ಕೃತಜ್ಞಳಾಗಿದ್ದೇನೆ. ಆದರೆ ನನಗೆ ಬಹುದಿನಗಳಿಂದಲೂ ಒಂದು ಆಸೆ ಇದೆ'

'ಏನು ಹೇಳು ಮಗು. ನಾನು ಮಾಡಿಕೊಡಲು ಪ್ರಯತ್ನಿಸುತ್ತೇನೆ.'

'ಜಮೀನ್‌ದಾರರಿಗೆ ಹೊಸವರ್ಷದಲ್ಲಿ 'ನೈಟ್ ಹುಡ್' ಕೊಡಿಸಬೇಕು.'

'ನೀನು ಲೇಡಿ ಆಗಬೇಕಾ!' ಎಂದು ಆಕೆ ನಕ್ಕರು. ಉಮಾದೇವಿಯು ತನ್ನ ಕೃತಜ್ಞತಾಪೂರ್ವಕವಾದ ವಂದನೆಯನ್ನು ನಸುನಗೆಯಿಂದ ಸೂಚಿಸಿದಳು.

ಅಂದಿನ ಕಾರ್ಯ-ಕಲಾಪಗಳು ಮುಗಿದ ಮೇಲೆ ಜಮೀನ್‌ದಾರರು ಏರ್ಪಡಿಸಿದ್ದ ಔತಣದ ಆತಿಥ್ಯವು ಆಹ್ವಾನಿತರೆಲ್ಲರಿಗೂ ನಡೆಯಿತು. ಅತಿಥಿಗಳೆಲ್ಲಾ ಔತಣದಿಂದ ಸುಪ್ರೀತರಾಗಿ ಜಮೀನ್‌ದಾರ್-ಜಯರಾಜ್ ಮತ್ತು ಉಮಾದೇವಿಯರನ್ನು ಕೊಂಡಾಡಿದರು.

ಸಂಜೆ ಹೊರಡುವಲ್ಲಿ ಗವರ್ನರವರು, ಅವರ ಪತ್ನಿಯವರು, ಜಯರಾಜ್, ಉಮಾದೇವಿ ಮತ್ತು ಗವರ್ನರವರೊಡನೆ ಬಂದಿದ್ದವರು, ಹುಲಿಯನ್ನು ಕೊಂದ ಸ್ಥಳಕ್ಕೆ ಹೋದರು ಹಿಂದಿನ ದಿನದ ಬೇಟೆಯ ಏರ್ಪಾಡನ್ನೆಲ್ಲಾ ಉಮಾದೇವಿ ಅವರಿಗೆ ವಿವರಿಸಿದಳು.

'ಬಹು ಧೈರ್ಯವಂತೆಯಮ್ಮಾ! ಮಿಸ್ಟರ್ ಜಯರಾಜ್! ನೀವೂ ನಿನ್ನೆ ಇಲ್ಲಿಯೇ ಇದ್ದಿದ್ದರೆ ಉಮಾದೇವಿಯವರಿಗೆ ಇನ್ನೂ ಬಹಳ ಸುಲಭವಾಗುತ್ತಿತ್ತು!' ಎಂದು ಗವರ್ನರ್ ಹೇಳಿದರು.

'ಅವರು ಎಲ್ಲದರಲ್ಲಿಯೂ ನನ್ನ ಸಂಗಾತಿ' ಎಂದು ನಸುನಗೆಯಿಂದ ಉಮಾದೇವಿ ಹೇಳಿದಳು.

ಎಲ್ಲರೂ ರಸ್ತೆಗೆ ಬಂದೊಡನೆಯೇ 'ನಾವು ಬರುತ್ತೇವೆ. ನಮ್ಮ ಲಾರಿಯಲ್ಲಿ ಹುಲಿಯನ್ನು ಕಳುಹಿಸಿಕೊಡಿ' ಎಂದು ಗವರ್ನರವರ ಹೆಂಡತಿಯು ಹೇಳಿದಳು.

'ತಾವೆಲ್ಲಾ ನಮ್ಮ ಜಮೀನ್‌ದಾರಿಗೆ ದಯಮಾಡಿಸಿದ್ದು ನಮ್ಮ ಭಾಗ್ಯ' ಎಂದು ಅವರಿಗೆ ಉಮಾದೇವಿ ಹೇಳಿದಳು.

'ನಿಮ್ಮನ್ನೆಲ್ಲಾ ನೋಡಿದುದು ನಮ್ಮ ಭಾಗ್ಯವೂ ಹೌದು, ಮಗು!' ಎಂದು ಗವರ್ನರವರ ಹೆಂಡತಿಯು ಹೇಳಿದರು.

ಅವರೆಲ್ಲರ ಕಾರುಗಳೂ ಹೊರಟವು.

—

೫

ಡ್ರಾಯಿಂಗ್ ರೂಮಿನಲ್ಲಿನ ಒಂದು ಸೋಫಾದ ಮೇಲೆ ಜಯರಾಜನೂ ಅವನ ಪಕ್ಕದಲ್ಲಿದ್ದ ಮತ್ತೊಂದು ಸೋಫಾದ ಮೇಲೆ ಉಮಾದೇವಿಯೂ ಕುಳಿತಿದ್ದರು. ಇವರಿಬ್ಬರ ನಡುವೆ ಇಟ್ಟಿದ್ದ ಟೀಪಾಯಿಯ ಮೇಲೆ ಅಡಿಗೆಯವನು ಪ್ರಾತಃಕಾಲದ ತಿಂಡಿ-ಕಾಫಿಗಳನ್ನು ತಂದಿಟ್ಟನು. ಇಬ್ಬರೂ ತಿಂಡಿಗಳನ್ನು ಮುಗಿಸಿದರು. ಕಾಫಿಯ ಬಟ್ಟಲುಗಳು ಇಬ್ಬರ ಕೈಗಳಲ್ಲಿಯೂ

ಇದ್ದುವು. ಆಗ ಬಾಗಿಲ ಮುಂದೆ 'ಟೆಲಿಗ್ರಾಂ' ಎಂದು ಟೆಲಿಗ್ರಾಂ ಆಳು ಕೂಗಿದನು.

'ಒಳಗೆ ಬಾ!' ಎಂದು ಉಷಾದೇವಿ ಹೇಳಿದಳು.

ಟೆಲಿಗ್ರಾಂ ಆಳು ಟೆಲಿಗ್ರಾಮನ್ನೂ, ಅದು ತಲುಪಿತೆಂದು ರುಜು ಮಾಡಿಸಿಕೊಳ್ಳುವ ಕಾಗದವನ್ನೂ ಒಂದು ಪೆನ್ಸಿಲನ್ನೂ ಟೀಪಾಯಿಯ ಮೇಲಿಟ್ಟನು. ಉಷಾ ಕವರನ್ನು ಒಡೆಯುವಲ್ಲಿ ಜಯರಾಜ್ ಕಾಗದಕ್ಕೆ ರುಜು ಹಾಕಿ, ಟೆಲಿಗ್ರಾಂ ಆಳಿಗೆ ಅದನ್ನು ಕೊಟ್ಟನು. ಆಳು ನಮಸ್ಕರಿಸಿ ಹೊರಟುಹೋದನು.

'ಉಷಾದೇವಿ ಟೆಲಿಗ್ರಾಮನ್ನು ಓದಿ, 'ಹೊಸ ವರ್ಷದ ಅಭಿನಂದನೆ ನಿಮಗೆ, ಸರ್ ಜಯರಾಜ್!' ಎಂದು ಅವನ್ನು ಇನಿಯನ ಕೈಗೆ, ಕೈಕುಲುಕುತ್ತಾ ಮುಗುಳುನಗೆಯಿಂದ ಕೊಟ್ಟಳು.

ಜಯರಾಜ್ ಅದನ್ನು ಓದಿ, 'ನಿಮಗೆ ಎರಡು ಅಭಿವಂದನೆಗಳು, ಲೇಡಿ ಉಷಾ ಜಯರಾಜ್! ಮೊದಲನೆಯ ವರ್ಗದ 'ಕೈಸರಿ ಹಿಂದ್' ಪದಕವೂ ನಿಮಗೆ ಲಭಿಸಿದೆ!!' ಎಂದು ತಾನೂ ಇನಿಯಳ ಕೈಯನ್ನು ಸಂತೋಷದಿಂದ ಕುಲುಕಿದನು.

ಆಗ ಜಯರಾಜನ ತಾಯಿ, ಮುದುಕಿ, ಅಲ್ಲಿಗೆ ಬಂದಳು. ಉಷಾದೇವಿ ಇನಿಯನ ಕಡೆ ನೋಡಿ, ಸಂಜ್ಞೆಮಾಡಿ, ಮುದುಕಿಗೆ ಕಾಲೂರಿ ನಮಸ್ಕಾರ ಮಾಡಿದಳು. ಜಯರಾಜ್ ತಾಯಿಗೆ ಅಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಮುದುಕಿಗೆ ಅವರ ಅಂದಿನ ರೀತಿಯನ್ನು ಕಂಡು ಆಶ್ಚರ್ಯವೂ ಸಂತೋಷವೂ ಆಯಿತು. 'ದೀರ್ಘಕಾಲ ದಂಪತಿಗಳಾಗಿ ಸುಖವಾಗಿ ಬಾಳಿ' ಎಂದು ಮುದುಕಿ ಇಬ್ಬರನ್ನೂ ಹರಸಿ, 'ಏನೋ ಮಗು ಟೆಲಿಗ್ರಾಂ? ಅದನ್ನು ಕೇಳಲು ಬಂದೆ' ಎಂದಳು.

'ಅಮ್ಮಾ! ನನಗೆ, ಮತ್ತೆ ಯಾರಿಗೂ ಈ ವಯಸ್ಸಿಗೆ ದೊರೆಯದ, ಇಂದು ಪ್ರಾರಂಭವಾಗುವ ಹೊಸವರ್ಷದ ಬಿರುದು 'ನೈಟ್‌ಹುಡ್' ಸಾರ್ವಭೌಮರು ದಯಪಾಲಿಸಿರುತ್ತಾರೆ. ನಿನ್ನ ಸೊಸೆಗೆ, ಭಾರತದ ಹಿತಕ್ಕಾಗಿ ದುಡಿಯುವವರಿಗೆ ಕೊಡುವ ಮೊದಲನೆಯ ವರ್ಗದ 'ಕೈಸರಿ ಹಿಂದ್' ಸುವರ್ಣ

ಪದಕ ಬಂದಿದೆ. ಗವರ್ನರವರ ಕಾರ್ಯದರ್ಶಿ, ಅವರ ಅಪ್ಪಣೆ ಮೇರೆಗೆ, ನಿನ್ನೆ ರಜಾ ಆದರೂ ಎಕ್ಸಪ್ರೆಸ್ ಟೆಲಿಗ್ರಾಂ ಮಾಡಿದ್ದಾರೆ! ಇನ್ನು ಮೇಲೆ ಉಮಾ, ಲೇಡಿ ಉಮಾ ಜಯರಾಜ್! ಅಮ್ಮಾ ನೀನು ನೈಟಿನ ತಾಯಿ!' ಎಂದು ಹೇಳಿದನು.

"ಸಂತೋಷ ಮಗು, ರಾಜ್ಯ ಎಲ್ಲಾ ಹೇಳೋ ರಾಜ್ಯಲಕ್ಷ್ಮಿ ನೀನು ಮನೆಯ ಭಾಗ್ಯ ಲಕ್ಷ್ಮಿಯಾಗಿರು ತಾಯಿ!" ಎಂದು ಮುದುಕಿ ನಗು ಮುಖದಿಂದ ಮಗ ಮತ್ತು ಸೊಸೆಯನ್ನು ನೋಡುತ್ತಾ ಹೇಳಿದಳು.

ಉಮಾದೇವಿ ಅತ್ತೆಯ ಹರಕೆಯನ್ನು ಕೇಳಿ ಇನಿಯನ ಮುಖವನ್ನು ನಸುನಗೆಯಿಂದ ನೋಡಿದಳು.

# ಸತಿ

೧

'ಅತ್ತೆ! ಅತ್ತೆ!!' ಎಂದು ಓಡಿ ಬಂದ ಪ್ರಮೀಳ ಪೂಜಾಮಗ್ನಳಾಗಿದ್ದ ಬೂಂದಿ ಮಹಾರಾಣಿಯನ್ನು ನೋಡಿ, ಪೂಜಾಗೃಹದ ಬಾಗಿಲಲ್ಲಿಯೇ ನಿಂತು, ಎವೆಯಿಕ್ಕದೆ ಮಹಾರಾಣಿ ಪೂಜೆ ಮಾಡುತ್ತಿರುವುದನ್ನೇ ನೋಡುತ್ತಾ ಇದ್ದಳು.

ಬೂಂದಿ ಮಹಾರಾಣಿಗೆ ಆಕೆಯ ಜೀವಸರ್ವಸ್ವವೇ ಆ ಪೂಜಾಗೃಹ. ಪೂಜಾಮಂದಿರದಲ್ಲಿ ನಿಂತಿರುವ ಹದಿನೆಂಟು ವರ್ಷದ ವೇಣುಲೋಲನ ವಿಗ್ರಹ. ವಿಗ್ರಹದ ಬಳಿ ನಿಂತಿದ್ದ ಆಕಳೊಂದು. ಕೆಳಗಡೆಯಲ್ಲಿ ಕುಳಿತು ವೇಣುಗಾನವನ್ನು ಆಲಿಸುತ್ತಿದ್ದ ರಾಧೆ. ವೇಣುಲೋಲನ ಇಕ್ಕಡೆಗಳಲ್ಲಿಯೂ ಪೂರ್ಣಾಕೃತಿಯ ಎರಡು ತೈಲಚಿತ್ರಗಳು. ಮೂರ್ತಿಯ ಬಲಗಡೆಯಲ್ಲಿ ಚಿತ್ರಿತವಾಗಿದ್ದುದು ಮಹಾರಾಜ ಉದಯಚಂದ್ರನ ಷೋಡಶವರ್ಷದ ಮೂರ್ತಿ. ಮಹಾರಾಣಿ ಬಹಳ ಕಷ್ಟಪಟ್ಟು ಅದನ್ನು ಬರೆಯಿಸಿದ್ದಳು. ಅಂದಿನ ರೋಗಗ್ರಸ್ತನಾದ ಮಹಾರಾಣನ ಆಕೃತಿಯನ್ನು ಮುಂದಿಟ್ಟು, ತಾನು ಎಳೆತನದಲ್ಲಿ ನೋಡಿ ಮೋಹಿಸಿದ ಮಹಾರಾಣನ ಮೂರ್ತಿಯನ್ನು ವರ್ಣಿಸಿ, ಭಾರತದಲ್ಲಿ ಎಲ್ಲಾ ಅರಸಿ ತಂದ ಚಿತ್ರಶಿಲ್ಪಿಯಿಂದ ಆ ವಯಸ್ಸಿನಲ್ಲಿ ಇದ್ದಂತೆ ಬರೆಯಿಸಿದ್ದಳು. ಅದು ಆಕೆಯ ಪ್ರಾಣ. ಕೃಷ್ಣಮೂರ್ತಿಯ ಎಡಗಡೆಯಲ್ಲಿದ್ದುದೂ ಸೊಗಸಾದ ತೈಲಚಿತ್ರ. ಅರಾವಳಿ ಬೆಟ್ಟದ ಮೇಲಿನ ಕಾಡಿನ ಒಂದು ದೃಶ್ಯ. ಮಹಾರಾಣಿಯ ಹಿಂದಿನ ಸ್ಥಿತಿಯ ಒಲುಮೆಯ ದೃಶ್ಯ. ಮದುವೆಯಾದ ಮೇಲೆ ಒಂದು ಪೂರ್ಣಿಮೆಯ ದಿನ ರಾತ್ರಿ ಕಾಡಿ

ಸಲ್ಲಿ ಮಹಾರಾಣನೊಡನೆ ನಿಂತು ದೂರದಲ್ಲಿರುವ ಹುಲಿಯನ್ನು ಬೇಟೆ ಯಾಡುವ ದೃಶ್ಯ.

ವೇಣುಲೋಲನನ್ನು ಪೂರ್ಣ ತುಲಸೀಮಾಲನನ್ನಾಗಿ ಮಾಡಿ, ಅಮೌಲ್ಯ ಪೀತಾಂಬರದಿಂದ ಸಿಂಗರಿಸಿದ್ದಳು. ಎರಡು ತೈಲಚಿತ್ರಗಳಿಗೂ ಒಂದೊಂದು ದೊಡ್ಡ ಪುಷ್ಪಮಾಲೆಯನ್ನು ಹಾಕಿ, ವೇಣುಲೋಲನ ಪಾದಗಳನ್ನು ಬಿಡಿ ಹೂಗಳು, ತುಳಸಿ ಮತ್ತು ಮಂತ್ರಾಕ್ಷತೆಯಿಂದ ಮುಚ್ಚಿದ್ದಳು. ಮಹಾ ರಾಣಿ ತನ್ನ ತಲೆಯನ್ನು ಆತನ ಪಾದಗಳ ಮೇಲಿಟ್ಟು, ಮನಬಿಚ್ಚಿ, ದನಿ ಯಿಲ್ಲದೆ, ಅಂತರಾಳದಲ್ಲಿ ಮನಸ್ಸಿನಲ್ಲಿರುವುದನ್ನೆಲ್ಲಾ ಹೇಳುತ್ತಾ ಕಣ್ಣೀರು ಸುರಿಸಿದಳು.

ಹೊರಗಡೆ ಗುಂಡು ಹಾರಿಸಿದ ಧ್ವನಿಯು ಕೇಳಿಸಿತು. ಬೆಚ್ಚಿಗಳು. ತಲೆಯೆತ್ತಿ, ಮುಖ ತಿರುಗಿಸಿ ಬಾಗಿಲ ಕಡೆ ನೋಡಿದಳು. ತಲೆ ಬಗ್ಗಿಸಿ ನೀರು ತುಂಬಿದ ಕಣ್ಣುಗಳಿಂದಿದ್ದ ಪ್ರಮೀಳಳನ್ನು ನೋಡಿ, 'ಬಾ ಮಗು! ಏಕೆ ಹಾಗೆ ನಿಂತಿರುವೆ, ಬಾಮ್ಮಾ!' ಎಂದಳು.

ಚಿಕ್ಕ ಮಗುವಿನಂತೆ ಮಹಾರಾಣಿಯ ಹತ್ತಿರ ಬಂದ ಪ್ರಮೀಳ ಅವಳ ತೊಡೆಯ ಮೇಲೆ ಮುಖವಿಟ್ಟು ಬಿಕ್ಕಿಬಿಕ್ಕಿ ಅಳತೊಡಗಿದಳು.

'ಏಕೆ ಮಗು? ಏನು ಸಮಾಚಾರ?' ಎಂದು ಮಹಾರಾಣಿ ಅವಳ ತಲೆಯನ್ನು ಸವರುತ್ತಾ ಕೇಳಿದಳು.

'ಮಹಾರಾಣರ ಕಾಯಿಲೆ ಹೆಚ್ಚಾಗಿದೆ ಅತ್ತೆ!'

'ನಾನು ಅಣ್ಣನಿಗೆ ಹೇಳಿಕಳುಹಿಸಿದುದಕ್ಕೆ ಅವರು ಏನು ಹೇಳಿದ ರಂತೆ?'

'ನಿನ್ನೆ ಅಣ್ಣ ಮಹಾರಾಣರ ಹತ್ತಿರ ಪ್ರಸ್ತಾಪಿಸಿದರಂತೆ. ನೀವು ನೋಡಲು ಬರುವಿರೆಂಬ ಮಾತನ್ನು ಕೇಳಿ ನಡುಗಿದರಂತೆ ಮಹಾರಾಣರು! ಆಮೇಲೆ ಅವರು 'ಬೇಡ; ಖಂಡಿತ ಅವರನ್ನು ಇಲ್ಲಿಗೆ ಬಿಡಬೇಡ' ಎಂದು ಮಂತ್ರಿಗಳಿಗೆ, ಸೈನ್ಯಾಧಿಕಾರಿಗಳಿಗೆ ಆಜ್ಞಾಪಿಸಿ, ಅಣ್ಣನಿಗೂ ತಿಳುಹಿಸಿದ ರಂತೆ'

'ಆ!'

' ಹೌದತ್ತೆ' ಎಂದು ತಲೆಯೆತ್ತಿ, ತನ್ನ ಅತ್ತೆ ವೀರ ಉದಯಚಂದ್ರನ ಬಳಿ ವೀರ ರಜಪೂತ ರಾಣಿಯಾಗಿ ವನರಾಜನನ್ನು ಭಯವಿಲ್ಲದೆ ಹೊಡೆಯಲು ಎತ್ತಿದ ಕತ್ತಿಯನ್ನು ಚಿತ್ರಿಸಿದ ಚಿತ್ರವನ್ನು ನೋಡಿ, ' ಈ ಎರಡು ತೈಲ ಚಿತ್ರಗಳೂ ಯಾವುದತ್ತೆ ಹೊಸವು? ವೇಣುಲೋಲನ ಪ್ರತಿಮೆಯನ್ನು ನೋಡಿದ್ದೇನೆ ' ಎಂದಳು.

' ಒಂದು ವರ್ಷದ ಹಿಂದೆ ಪ್ರಾರಂಭಿಸಿದ ಈ ಚಿತ್ರಗಳೆರಡನ್ನೂ ಇಂದು ಮುಗಿಸಿ ತಂದು ಕೊಟ್ಟ ಚಿತ್ರಕಾರ. ಸ್ವಾಮಿಯೊಡನೆ ಸ್ವಾಮಿಯನ್ನು ಈ ರೀತಿಯಿಂದಲಾದರೂ ದರ್ಶನ ತೆಗೆದುಕೊಂಡು ಪೂಜಿಸಿದೆ. ಮಗೂ! ನಮ್ಮ ಮನೆತನದ ನೀನಾದರೂ ಒಬ್ಬ ಸಾಧಾರಣ ವೀರ ರಜಪೂತನನ್ನು ವರಿಸಿ ಸುಖವಾಗಿ ಬಾಳು. ಮರೆತುಬಿಡು ಯುವರಾಜ ಕುಮಾರ ಪ್ರತಾಪಸಿಂಹನನ್ನು. ನನ್ನಂತೆ ದುಃಖಿತೆಯಾಗದೆ ಸುಖವಾಗಿರು, ಕಂದ ! '

' ಇಲ್ಲ, ಅತ್ತೆ. ಅವರಿಗೆ ನನ್ನ ಕಂಡರೆ ಪ್ರಾಣ. ಮಹಾರಾಣರ ಬಳಿ ಇದ್ದುದರಿಂದ ನಿನ್ನೆ ಅವರನ್ನು ನೋಡಲಿಲ್ಲ. ಅವರೂ ಎಷ್ಟೋ ಪ್ರಯತ್ನ ಪಟ್ಟರಂತೆ, ಅಲ್ಲಿ ಬಂದು ನನ್ನ ಹಾಗೂ ಮಹಾರಾಣರನ್ನು ನೋಡಬೇಕೆಂದು. ಆದರೆ ಡಾಕ್ಟರ ಕಟ್ಟಾಜ್ಞೆಯ ಮೇರೆಗೆ ಅಲ್ಲಿ ಬಿಡಲಿಲ್ಲವಂತೆ. ಈ ದಿನ ಇಲ್ಲಿಗೆ ಬರಲು ಮೊದಲು ಅರಮನೆಯ ಮುಂದೆ ನೋಡಿದೆ. ನನ್ನ ಮುಗುಳುನಗೆಯೇ ಅವರಿಗೆ ತೃಪ್ತಿ ಕೊಟ್ಟಿತು. ಸಡಗರದಿಂದ ಇಲ್ಲಿಗೆ ಬರುತ್ತಿರುವ ನನ್ನನ್ನು ತಡೆಯದೆ ಸುಮ್ಮನಾದರು. '

'ಹೌದು ಕಂದ, ಈಗ ಹೀಗೆಯೇ. ಮಹಾರಾಣರೂ ಹಿಂದೆ ಹಾಗೆಯೇ ಇದ್ದರು. ನೋಡು ಆ ತೈಲಚಿತ್ರಗಳನ್ನು. ನಾವು ಆಗ ಹೇಗಿದ್ದೆವೆನ್ನುವುದು ತಿಳಿಯುತ್ತದೆ. ಅರಾವಳಿ ಬೆಟ್ಟದ ಮೇಲೆ ಬಲು ರೋಷದಿಂದ ನುಗ್ಗುತ್ತಿದ್ದ ಹುಲಿಯನ್ನು ಅಣ್ಣಂದಿರೊಡನಿದ್ದ ನಾನು ಅಂದು ಗುಂಡಿನಿಂದ ಹೊಡೆದು ನಿಮ್ಮ ಸೋದರಮಾವ ಮಹಾರಾಣರ ಪ್ರಾಣವನ್ನು ಕಾಪಾಡಿದ ದಿನ, ಅವರು ಅಣ್ಣಂದಿರ ಬಳಿ ಬಂದು ತನ್ನ ಪ್ರಾಣವನ್ನು ಉಳಿಸಿದುದಕ್ಕಾಗಿ ತನ್ನ ಪ್ರಾಣವನ್ನು ಎನಗೆ ಕೊಟ್ಟಿರುವುದಾಗಿ ಹೇಳಿ ವಿವಾಹವಾದರು. ಮದುವೆಯಾದ ಹೊಸದರಲ್ಲಿ ಬೇಟೆಗೆ ಸದಾ ನನ್ನನ್ನು ಜತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದರು. ಅದು ಎಷ್ಟು ಕಾಲ, ಕಂದ ! ಬೇರೆ ರೂಪವತಿ ಕಣ್ಣಿಗೆ

ಬೀಳುವ ವರೆಗೆ. ಈಗ ನೋಡು ಹೇಗಿದೆ! ನನ್ನನ್ನು ನೋಡಲೂ ಅಲ್ಲಿಗೆ ಬಿಡರು. ನನ್ನನ್ನೂ ಈ ರಾಜ್ಯ ಬಿಟ್ಟು ಓಡಿಸಿಬಿಡುತ್ತಿದ್ದರು. ಆದರೆ ನನ್ನ ಪುಣ್ಯ, ಪ್ರಜೆಗಳೆಲ್ಲಾ ನನ್ನನ್ನು ವಿಶ್ವಾಸದಿಂದ ಕಾಣುತ್ತಿದ್ದಾರೆ. ಅದಕ್ಕಾಗಿಯೇ ಮಹಾರಾಣರು ನನ್ನನ್ನು ಮಾತನಾಡಿಸಲು ಹೆದರುತ್ತಾರೆ. ಅಣ್ಣ ಅವರಿಗೆ ಬೇಕು. ಆತ ಬೇಟೆಯ ಸ್ನೇಹಿತ—ಠಾಕೂರ್ ಸಾಹೇಬ! ನಾನು ಬೇಡ; ಆ ರತ್ನದ ರಂಭೆ ಬೇಕು!'

ಪ್ರಮೀಳ ಮಾತನಾಡಲಿಲ್ಲ. ಕಣ್ಣೀರು ಸುರಿಸಿದಳು; ಮಹಾರಾಣಿಯು ಸೋದರ ಸೊಸೆಯ ಕಣ್ಣೀರನ್ನೊರಸಿದಳು.

ಪ್ರಮೀಳ ದೈನ್ಯದೃಷ್ಟಿಯನ್ನು ಅತ್ತೆಯ ಮೇಲೆ ಬೀರಿದಳು. ಎಳೆತನದಲ್ಲಿ ತಾಯನ್ನು ಕಳೆದುಕೊಂಡು, ತಾಯಿಯಂತೆ ತನ್ನನ್ನು ಸಾಕಿ ಸಲಹಿದ, ದುಃಖದ ಸ್ಥಿತಿಯಲ್ಲಿದ್ದ ಅತ್ತೆಯ ಮೇಲೆ ಬೀರಿದಳು.

ಮಹಾರಾಣಿಯು, "ಪ್ರಮೀಳ, ಹೋಗಿ ಯುವರಾಜಕುಮಾರನನ್ನು ಕರೆದುಕೊಂಡು ಬಾ! ನಿಮ್ಮಿಬ್ಬರನ್ನೂ ಮನಸದಣಿಯೆ ಹರಸುತ್ತೇನೆ' ಎಂದಳು.

ಮರುಮಾತನಾಡದೆ ಪ್ರಮೀಳ ಎದ್ದುಹೋದಳು.

ಸ್ವಲ್ಪ ಹೊತ್ತಾದ ಮೇಲೆ ತರುಣ ಭಾವೀ ದಂಪತಿಗಳುಬಂದು ಮಹಾರಾಣಿಗೆ ನಮಸ್ಕರಿಸಿದರು. ಆಕೆ ಯುವರಾಜ ಕುಮಾರನ ಕೈಯನ್ನು ಪ್ರಮೀಳಳ ಕೈಮೇಲಿಟ್ಟು, ಆ ಎರಡು ಕೈಗಳನ್ನೂ ತನ್ನ ಕೈಗಳಿಂದ ಹಿಡಿದುಕೊಂಡು, 'ಹೇಳು, ಸತ್ಯವಾಗಿಯೂ ಪ್ರಮೀಳೆಗೆ ಎಂದೂ ಅನ್ಯಾಯ ಮಾಡದೆ ನಿಜವಾದ ಪತಿಯಾಗಿರುತ್ತೇನೆಂದು' ಎಂದಳು.

ಯುವರಾಜಕುಮಾರನು ಪ್ರತಿಭನಾಗಿ ಮುಖವೆತ್ತಿ ಮಹಾರಾಣಿಯನ್ನೊಮ್ಮೆ ನೋಡಿ, 'ನಿಜವಾಗಿಯೂ ಪ್ರಮೀಳೆಯ ಪ್ರಿಯಪತಿಯಾಗಿ ಮುಂದಿರುವ ಪ್ರೇಮಮೂರ್ತಿಯಾಣೆಗೂ ಇರುತ್ತೇನೆ' ಎಂದು ಪ್ರಮೀಳೆಯ ಕಡೆ ನೋಡಿ ಏನೂ ಯೋಚಿಸದೆ ಮಹಾರಾಣಿಗೆ ಪತಿಜ್ಞೆಮಾಡಿದನು.

ದುಃಖಿತ ಮಹಾರಾಣಿಯ ಮುಖದಿಂದ ತೃಪ್ತಿಯ ಕಿರುನಗುವಿನ ಕಣವೊಂದು ಚದರಿ ತರುಣ ದಂಪತಿಗಳ ಕಂಗಳನ್ನು ಸೇರಿತು.

ಯುವರಾಜ ಕುಮಾರನ ಕಣ್ಣುಗಳಲ್ಲಿ ನೀರು ತುಂಬಿತು. ಧ್ವನಿ ಗದ್ಗದ ವಾಯಿತು. ಏನೋ ಹೇಳಬೇಕೆಂದಿದ್ದನು. ಮಾತು ಹೊರಡಲಿಲ್ಲ. ಮಹಾ ರಾಣಿಯೇ ಯುವರಾಜ ಕುಮಾರನ ತಲೆ ಸವರುತ್ತಾ, ' ಹೇಳು ಮಗು! ' ಎಂದಳು.

' ಅಮ್ಮಾ! ನಾನು ಏನು ತಪ್ಪುಮಾಡಿದ್ದರೂ ಕ್ಷಮಿಸಿ. ನಿಮ್ಮನ್ನು ನೋಡಬೇಕೆಂದು ನಾಲ್ಕು ವರ್ಷಗಳಿಂದ ಪ್ರಯತ್ನಿಸಿದರೂ ನೀವು ತಲೆಕೂಡ ತಿರುಗಿಸಿ ನನ್ನ ಕಡೆ ನೋಡಲಿಲ್ಲ. ನನಗೆ ತಿಳಿದ ಹಾಗೆ ನಾನು ನಿಮ್ಮಲ್ಲಿ ಯಾವ ತಪ್ಪನ್ನೂ ಮಾಡಿಲ್ಲ ತಂದೆಯಿಲ್ಲದ ಅನಾಥನ ದೇಶಕ್ಕೆಲ್ಲಾ ಕಲ್ಪ ವೃಕ್ಷದಂತಿರುವ ನೀವು ವಿಶ್ವಾಸ ತೋರಿಸದುದು ನನ್ನ ದೌರ್ಭಾಗ್ಯವೆಂದಿದ್ದೆ ಇಂದು ಪ್ರಮೀಳೆಯ ಪ್ರೇಮವನ್ನು ಪಡೆದ ನನ್ನ ಪುಣ್ಯ ನಿಮ್ಮ ದರ್ಶನ ವಿತ್ತಿತು '

' ಮಗು ನಿಮ್ಮ ದೊಡ್ಡತಂದೆಯು ಮೇಲಿನ ಕೋಪವನ್ನು ನಿನ್ನ ಮೇಲೆ ಸ್ವಲ್ಪ ತೋರಿಸಿದ್ದೆ. ಪ್ರಮೀಳೆ ನಿನ್ನನ್ನು ಪ್ರೀತಿಸುತ್ತಾಳೆಂದು ತಿಳಿದ ಮೇಲಂತೂ ನನಗೆ ನಿನ್ನ ಮೇಲೆ ಕ್ರೋಧ ಇನ್ನೂ ಹೆಚ್ಚಾಯಿತು. ಅವಳ ಸ್ಥಿತಿಯೂ ನನ್ನ ಸ್ಥಿತಿಯಂತಾಗುವುದೋ ಎಂಬ ಭಯ. ಅವಳಿಗೂ ಎಷ್ಟೋ ಸಲ—ಈ ಸ್ವಲ್ಪ ಹೊತ್ತಿನ ಹಿಂದೆಯೂ—ಯಾರಾದರೂ ಒಬ್ಬ ಸಾಧಾರಣ ವೀರ ರಜಪೂತನನ್ನು ವರಿಸಿ ಸುಖವಾಗಿರೆಂದು ಹೇಳಿದೆ. ಆದರೆ ಪ್ರಮೀಳೆ ನಿನ್ನ ಮೇಲೆಯೇ ಅನಂತ ಪ್ರೇಮವನ್ನಿಟ್ಟಿದ್ದಾಳೆ. ನಿಮ್ಮ ದೊಡ್ಡಪ್ಪನೂ ನನ್ನಲ್ಲಿ ನೀನು ಈಗ ಅವಳಲ್ಲಿ ಪ್ರೀತಿಯಿಟ್ಟಿರುವಂತೆಯೇ ಇಟ್ಟಿದ್ದ '

' ಅಮ್ಮಾ ! ನಾನು ಮಾತಿಗೆ ತಪ್ಪಿದರೆ ರಜಪೂತನಲ್ಲ ' ಎಂದು ಯುವ ರಾಜ ಕುಮಾರನು ಮಹಾರಾಣಿಯ ಸ್ಥಿತಿಯನ್ನು ನೆನೆದು ಕಣ್ಣೀರು ಸುರಿ ಸಿದ. ಅವನು ಇನ್ನೂ ಏನೋ ಹೇಳಬೇಕೆಂದಿದ್ದುದು ಅವನ ಮುಖದ ಮೇಲೆ ಮಹಾರಾಣಿಗೆ ಕಾಣುತ್ತಿತ್ತು. ' ಏನು ಮಗು ? ' ಎಂದಳು.

' ಮಹಾರಾಣಿಯರು ಹೇಳಿದ್ದ ಆ ಸ್ವರ್ಣಾಂಬರ ಇಂದು ಕಾಶಿಯಿಂದ ಬಂದಿದೆ '

' ಊ '

'ಮಹಾರಾಣಿಯರು ಅದನ್ನು ತಾವು ಮಲಗಿದ್ದ ಹಾಸಿಗೆಯಿಂದಲೇ ನೋಡಿ, ಅದನ್ನು ಊಟ್ಟು ಬರುವಂತೆ ಅಜೀಜಾ ಬೇಗಮ್‌ಗೆ ಮಂತ್ರಿಯ ಮೂಲಕ ಕಳುಹಿಸಿದರಂತೆ.'

'ಊ!'

ಬಹುಕಾಲವಾದರೂ ಆಕೆ ಒರಲಿಲ್ಲ. ಅಂತಃಪುರದಲ್ಲಿಲ್ಲವಂತೆ'

'ಏನಾದಳು ಮಹಾರಾಣಿಯರ ಪ್ರೇಮಪುತ್ಥಳಿ!'

'ಅಮ್ಮಾ! ತಿಳಿಯದು. 'ಮಹಾರಾಣಿರಿಗೆ ಉಸಿರು ಬಹಳ ಜೋರಾಗಿ ಆಡುತ್ತಿದೆ. ನಾಳೆ ಬೆಳಗ್ಗೆ ಇಷ್ಟು ಹೊತ್ತಿನ ವರೆಗೆ ಈ ರೀತಿಯಲ್ಲಿ ಅವರಿದ್ದರೆ ಅದೃಷ್ಟ!' ಎಂದು, ನೋಡಿದ ಆ ಕಲ್ಕತ್ತೆಯ ಇಂಗ್ಲಿಷ್ ಡಾಕ್ಟರು ಹೇಳಿದರು. ದೊಡ್ಡಪ್ಪನ ಸ್ನೇಹಿತರಾದ ಎಲ್ಲಾ ಮಹಾರಾಜರೂ ಬಂದಿದ್ದಾರೆ'

ಮಹಾರಾಣಿಯು ನಿಟ್ಟುಸಿರನ್ನು ಬಿಟ್ಟಳು.

ಆಕೆ ಸ್ವಲ್ಪ ಹೊತ್ತಾದ ಮೇಲೆ, 'ನೀವಿಬ್ಬರೂ ಹೋಗಿ. ಮಹಾರಾಣಿರು ನಿಮ್ಮಿಬ್ಬರನ್ನೂ ಕೇಳಬಹುದು. ಅಣ್ಣಾಸಿಗೆ ಹೇಗಾದರೂ ಮಾಡಿ ಒಮ್ಮೆ ಮಹಾರಾಣಿರ ದರ್ಶನವಾಗುವಂತೆ ಮಾಡೆಂದು ಹೇಳು, ಪ್ರಮೀಳ! ನಾನು ಅವರಿಗೆ ಬೇಡದಿದ್ದರೂ ಬೇಟೆಯಲ್ಲಿ ತನ್ನ ಜೀವದಂತಿರುವ ಅಣ್ಣಾ ಅವರಿಗೆ ಬೇಕು. ಆತನ ಮಾತನ್ನು ಅವರು ಸ್ವಲ್ಪವಾದರೂ ಕೇಳಬಹುದು' ಎಂದಳು.

ಪ್ರಮೀಳ ಮತ್ತು ಯುವರಾಜ ಕುಮಾರ ಮಹಾರಾಣಿಗೆ ವಂದಿಸಿ ನಿರುತ್ತರರಾಗಿ ಹೊರಟರು.

—

೨

ಮಹಾರಾಣಿಯು ಆಲೋಚನಾಮಗ್ನಳಾಗಿ ವೇಣುಲೋಲನ ಮುಂದೆ ಬಹಳ ಹೊತ್ತು ಕುಳಿತಳು. ಎಷ್ಟು ಹೊತ್ತಾಯಿತೆಂದು ಹೇಳುವುದೇ ಕಷ್ಟ. ಆಡಿಗಡಿಗೂ ನಿಟ್ಟುಸಿರನ್ನು ಬಿಡುವಳು. ಇದ್ದಕಿದ್ದಂತೆಯೇ ನಗುವಳು.

ವೇಣುಲೋಲನನ್ನು ನೋಡಿ, ಅವನ ಪಕ್ಕದಲ್ಲಿದ್ದ ಎರಡು ತೈಲಚಿತ್ರಗಳನ್ನೂ ನೋಡಿ, ಒಮ್ಮೆ ಗಟ್ಟಿಯಾಗಿ ನಕ್ಕಳು.

ಆರತಿಯ ತಟ್ಟೆಯನ್ನು ತೆಗೆದುಕೊಂಡು ಸ್ವಾಮಿಗೆ ಆರತಿ ಎತ್ತಿದಳು. ಕೃಷ್ಣಮೂರ್ತಿಯ ಎಡ-ಬಲಗಳಿಂದ ಅರ್ಚಿಸಿದ್ದ ಒಂದೊಂದು ಮಲ್ಲಿಗೆ ಹೂ ಕೆಳಗೆ ಬಿದ್ದಿತು.

'ಕಷ್ಟಪರಂಪರೆಯೇನೋ ನನಗಿದೆ, ದೇವಾ ! ಸುಖವಾವುದು ನನಗೆ ಲಭಿಸುತ್ತದೆ ! ' ಎಂದು ದೈನ್ಯದೃಷ್ಟಿಯನ್ನು ಆಕೆ ಸ್ವಾಮಿಯ ಕಡೆ ಬೀರಿದಳು ಅಂಜಲೀಬದ್ಧಳಾಗಿ ಸುಮ್ಮನೆ ಸ್ವಾಮಿಯನ್ನು ನೋಡುತ್ತ ನಿಂತಳು.

ದಾಸಿಯೊಬ್ಬಳು ಬಂದು ಕೈಮುಗಿಯುತ್ತಾ, 'ಮಹಾರಾಣಿ ! ತಮ್ಮ ಸೋದರಿಯರೊಬ್ಬರು ತಮ್ಮನ್ನು ನೋಡಬೇಕೆಂದು ಮುಂದಿನ ಕೊಟಡಿಯಲ್ಲಿ ಕಾದು ಕುಳಿತಿದ್ದಾರೆ ' ಎಂದಳು.

ಇದನ್ನು ಕೇಳಿ ಮಹಾರಾಣಿಗೆ ಆಶ್ಚರ್ಯವಾಯಿತು. 'ಸೋದರಿ ! ಸೋದರಿ ಯಾರು ? ನಮ್ಮ ತಂದೆ ಬೂಂದಿ ಮಹಾರಾಜನಿಗೆ ಜನಿಸಿದುದು ನಾನೊಬ್ಬಳು ನನ್ನ ಅಣ್ಣಂದಿರಿಬ್ಬರು—ಹೋ ! ಬಹುವಲ್ಲಭನಾದ ಮಹಾರಾಜನ ಮಡದಿ ಯಾರಾದರೂ ಇರಬಹುದು. ಏನು ಸಮಾಚಾರವೋ ! ಇಷ್ಟು ದಿನಗಳ ವರೆಗೂ ಅವರಾರೂ ನನ್ನನ್ನು ಒಂದು ದಿನವೂ ಕಣ್ಣೆತ್ತಿ ಕೂಡ ನೋಡಲಿಲ್ಲ ' ಎನ್ನುವ ವಿಷಯಗಳು ವಿದ್ಯುದ್ಗತಿಯಿಂದ ಅವಳ ತಲೆಯಲ್ಲಿ ಚಲಿಸಿ, ಆಕೆ ನಸುನಗೆಯಿಂದ, 'ವಿನಯದಿಂದ ಕೂಡಿ, ನೀನು ಅವರಿಗೆ ಎಲ್ಲಾ ಮರ್ಯಾದೆಯನ್ನೂ ಕೊಟ್ಟು, ಅವರನ್ನು ಇಲ್ಲಿಗೆ ಕರೆದುಕೊಂಡು ಬಾ ! ' ಎಂದಳು. ದಾಸಿಯು ನಮಸ್ಕರಿಸಿ ಹೊರಟುಹೋದಳು.

ಸ್ವಲ್ಪ ಹೊತ್ತಾದ ಮೇಲೆ ಅವಕುಂಠನವತಿಯಾದ ಯುವತಿಯೊಬ್ಬಳನ್ನು ಪೂಜಾಗೃಹದಲ್ಲಿ ಬಿಟ್ಟು ದಾಸಿಯು ಹೊರಟುಹೋದಳು. ಬಂದ ಯುವತಿಯು ಅವಕುಂಠನವನ್ನು ತೆಗೆದು, 'ಅಕ್ಕಾ ! ನನ್ನನ್ನು ಕಾಪಾಡಬೇಕು ' ಎಂದು ಮಹಾರಾಣಿಯ ಪಾದದ ಮೇಲೆ ಬಿದ್ದಳು.

ಮಹಾರಾಣಿಯು ಆಕೆಯನ್ನು ಮೇಲಕ್ಕೆತ್ತಿ ಹಾಸಿದ್ದ ರತ್ನಗಂಬಳಿಯ ಮೇಲೆ ಅವಳನ್ನು ಕೂಡಿಸಿ, ತಾನೂ ಅವಳ ಪಕ್ಕದಲ್ಲಿ ಕುಳಿತು, ಆಕೆ

ಯನ್ನು ಚೆನ್ನಾಗಿ ನೋಡಿದಳು. ಎಲ್ಲಿಯೋ ಯಾವಾಗಲೋ ನೋಡಿದ ನೆನಪು. ಯಾರೆಂದು ಬಂದವಳನ್ನು ಆಕೆ ಗುರ್ತಿಸದಾದಳು. ಇಬ್ಬರೂ ಸ್ವಲ್ಪ ಹೊತ್ತು ಒಬ್ಬರನ್ನೊಬ್ಬರು ನೋಡುತ್ತಾ ಕುಳಿತರು; ಮೌನವಾಗಿದ್ದರು.

ಇಬ್ಬರ ಪ್ರತಿಬಿಂಬಗಳೂ ಪೂಜಾಗೃಹದ ಗೋಡೆಗೆ ನೇತುಹಾಕಿದ್ದ ದೊಡ್ಡದೊಡ್ಡ ಕನ್ನಡಿಗಳಲ್ಲಿ ಪ್ರತಿಬಿಂಬಿಸಲ್ಪಟ್ಟಿದ್ದುವು. ಬ್ರಹ್ಮನು ಸೃಷ್ಟಿಸಿದ ರೂಪದ ಆದರ್ಶಮೂರ್ತಿಗಳು ಆ ಇಬ್ಬರೂ! ಅವರಲ್ಲಿ ಮಹಾರಾಣಿಯು ಕಾಡಿನಲ್ಲಿ ಬೆಳೆದ ಮಲ್ಲಿಗೆ; ಬಂದಾಕೆ ಕಸಿಮಾಡಿದ ಊರ ಮಲ್ಲಿಗೆ!

ಮಹಾರಾಣಿಯೇ ಮಾತನ್ನು ಮೊದಲುಮಾಡಿದಳು; 'ತಂಗೀ! ನಿನ್ನನ್ನು ನೋಡಿದ ನೆನಪಿದೆ. ಆದರೆ ಇದೇ ಮೊದಲು ಮಾತನಾಡಿಸಿದುದು' ಎಂದಳು.

'ಅಕ್ಕಾ! ನನ್ನ ಅಪರಾಧಗಳನ್ನೆಲ್ಲಾ ಕ್ಷಮಿಸು. ನಿನ್ನ ಸುಖದ ಹಾದಿಯಲ್ಲಿ ಅಡ್ಡವಾಗಿ ಬಂದು, ಮಹಾರಾಣರಿಂದ ನಿನ್ನನ್ನು ಬೇರೆ ಮಾಡಿದ ಪಾಪಿ—ಅಜೀಜಾ ನಾನೇ!'

'ಅಜೀಜಾ ಬೇಗಂ!' ಎಂದು ಮಹಾರಾಣಿಯ ಹೃದಯವು ಪ್ರತಿಧ್ವನಿಸಿತು; ನಿಸ್ತಬ್ಧಳಾದಳು; ಆಕೆಯನ್ನು ದೃಷ್ಟಿಸಿ ನೋಡಿದಳು!

ಸ್ವಲ್ಪ ಹೊತ್ತಾದ ಮೇಲೆ ಮಹಾರಾಣಿಯು ಮುಖದಲ್ಲಿ ಮುಗುಳು ನಗೆಯನ್ನು ಸೂಸಿ, 'ಮಹಾರಾಣರು ರಸಿಕರು!' ಎಂದುಕೊಂಡು, 'ನನ್ನಿಂದ ಏನು ಸೇವೆಯಾಗಬೇಕಾಗಿದೆಯಮ್ಮಾ?' ಎಂದು ಬೇಗಮ್‌ಳನ್ನು ಕೇಳಿದಳು.

'ನನಗೆ ಪ್ರಾಣದಾನ ಮಾಡಬೇಕು, ಅಕ್ಕಾ! ಲಕ್ನೋದಲ್ಲಿ ನನ್ನ ತಾಯಿಯನ್ನು ನೋಡುವ ಆಸೆ ಬಹಳವಾಗಿ ಹೋಗಿದೆ. ಎಂಟು ದಿನದ ಹಿಂದೆಯೇ ಹೋಗಬೇಕೆಂದಿದ್ದೆ. ಮಹಾರಾಣರು ಹೋಗಕೂಡದೆಂದು ಕಟ್ಟಾಜ್ಞೆ ಮಾಡಿದರು. ನಿನ್ನೆಯಿಂದ ಹೇಳಿಕಳುಹಿಸುತ್ತಿರುವರು. ಅರಮನೆಯ ವೈದ್ಯರು ಸ್ವಲ್ಪ ಹೊತ್ತಿನ ಹಿಂದೆ ಬಂದು, 'ಮಹಾರಾಣರ ಹೃದಯ ಬಹಳ ನಿಧಾನವಾಗಿ ಹೊಡೆದುಕೊಳ್ಳುತ್ತಿದೆ. ಇನ್ನು ಕೆಲವು ಗಂಟೆಗಳಲ್ಲಿ ಏನಾಗುವುದೋ! 'ಅಜೀಜಾನ ಕರೆಯಿರಿ, ದಾಹ. ಅವಳ ಕೈಯಿಂದ ನೀರು ಬೇಕು. ನಾನು ಕೊಟ್ಟ ಸ್ವರ್ಣಾಂಬರವನ್ನು ಉಟ್ಟು ಅವಳನ್ನು ಬರಹೇಳಿ. ನನ್ನೊಡನೆಯೇ ಅವಳೂ ಬರಬೇಕು.' ಎಂದೆಲ್ಲಾ

ಹೇಳುತ್ತಿದ್ದಾರೆ, ಮಹಾರಾಣರು ' ಎಂದರು. ಅಕ್ಕಾ! ಮಹಾರಾಣರಿಂದ ನಾನು ಸುಖ ಬಯಸಿ ಇಲ್ಲಿಗೆ ಒಂದೇನೇ ಹೊರತು ಕಷ್ಟವನ್ನಲ್ಲ. ನಿಮ್ಮ ಸುಖದ ಹಾದಿಯಲ್ಲಿದ್ದ ಮುಳ್ಳಾದರೂ ದಯವಿಟ್ಟು ನನ್ನನ್ನು ಮನ್ನಿಸಿ ನನ್ನೂರಿಗೆ ಕಳುಹಿಸಿಕೊಡಿ ! '

ಮಹಾರಾಣಿಯು ನಸುನಗೆಯನ್ನು ಮುಖದ ಮೇಲೆ ಸೂಸಿದಳು.

ಅಜೀಜಾ ಮಹಾರಾಣಿಯ ಕೈಗಳನ್ನು ತನ್ನ ಎರಡು ಕೈಗಳಿಂದಲೂ ಹಿಡಿದುಕೊಂಡು ' ಆಗಲಿ ಅನ್ನಿ ಅಕ್ಕಾ ಈಗ ನಾನು ಹೋಗದೆ ಹೋದರೆ ದೂತಿಯರು ಬಂದು ನನ್ನನ್ನು ಎಳೆದುಕೊಂಡು ಹೋಗುವರು. ಅಕ್ಕಾ ! ನಾನು ಅವರೊಡನೆ ಹೋಗಲಾರೆ. ನನ್ನ ಪ್ರಾಣವನ್ನು ಕಾಪಾಡಬೇಕು. ನನಗೆ ಬದಲು ಮಹಾರಾಣರ ಬಳಿ ನೀವು ಹೋಗಬೇಕು. '

' ಅದಾಗದು, ಅಜೀಜಾ ! ನನ್ನನ್ನು ಅವರು ಎಲ್ಲಾ ಗುರ್ತಿಸುವರು. '

' ನಾನು ಮಹಾರಾಣರ ಬಳಿ ಇರುವಲ್ಲಿ ಯಾರೂ ಅವರ ಹತ್ತಿರ ಇರ ಕೂಡದೆಂದು ಮಹಾರಾಣರ ಮತ್ತು ನನ್ನ ಆಜ್ಞೆಯಾಗಿದೆ. ಕಲ್ಕತ್ತೆಯಿಂದ ಬಂದಿರುವ ಇಂಗ್ಲೀಷ್ ಡಾಕ್ಟರೊಬ್ಬರಲ್ಲದೆ ಅಲ್ಲಿ ಇನ್ನಾರೂ ಇರುವುದಿಲ್ಲ. ಆತನೂ ನಾನು ಹೋದಾಗ ಹೊರಟುಹೋಗುತ್ತಿದ್ದನು. ಆತ ನನ್ನನ್ನು ಗುರ್ತಿಸಲಾರ. ಮಹಾರಾಣರಿಗೆ ಈಗ ಪೂರ್ಣ ಪ್ರಜ್ಞೆಯಿಲ್ಲ ಅವರ ಕಣ್ಣಿಗೆ ಬೀಳುವುದು ಆ ಸ್ವರ್ಣಾಂಬರ–ಅವರ ಪ್ರೇಮದ ಸ್ವರ್ಣಾಂಬರ! ನಿನ್ನೆ ಬೆಳಗ್ಗೆ ತಾನೆ ಅದು ಬಂದಿದೆ. ಅದನ್ನು ಮುಂದಿನ ಕೋಟಡಿಯಲ್ಲಿಟ್ಟಿದ್ದೇನೆ' ಎಂದು ಹೇಳಿ ಆ ಸ್ವರ್ಣಾಂಬರವನ್ನು ತಂದು ಮಹಾರಾಣಿಯ ಕೈಗೆ ಕೊಟ್ಟು, ' ಇದು ನಿನಗೆ ನನ್ನ ಉಡುಗೊರೆ, ಅಕ್ಕಾ! ಮಹಾರಾಣರಿಗೆ ಸಂಜೆ ಬಂದು ನೋಡುವುದಾಗಿ ಹೇಳಿಕಳುಹಿಸಿದ್ದೇನೆ. ಅಷ್ಟರೊಳಗಾಗಿ ಇಲ್ಲಿಂದ ನನ್ನನ್ನು ಕಳುಹಿಸಿಕೊಡಬೇಕು. ' ಎಂದು ಬೇಡಿದಳು.

ಬೂಂದಿ ರಾಣಿಯು ಸ್ವಲ್ಪ ಹೊತ್ತು ತನ್ನಲ್ಲಿಯೇ ಆಲೋಚಿಸಿ, ' ಆಗಲಿ, ಅಮ್ಮ ! ' ಎಂದು ಅಜೀಜಾ ಬೇಗಮ್‌ಗೆ ಅಭಯವಿತ್ತು, ದಾಸಿಯನ್ನು ಕರೆದು, ತನ್ನ ನೆಚ್ಚಿನ ಆಳೂ, ತನ್ನ ತವರು-ಮನೆಯವನೂ ಆದ ಜಯಸಿಂಪನಿಗೆ ಕುದುರೆ-ಗಾಡಿಯನ್ನು ಊರ ಹೊರಗಿರುವ ಗಂಗ್ರುಬೆಟ್ಟದ ತಪ್ಪಲಿಗೆ ತರಬೇಕೆಂದೂ, ಅಲ್ಲಿ ತನ್ನನ್ನು ನೋಡಬೇಕೆಂದೂ ಹೇಳಿಕಳುಹಿಸಿ, ಬೆಟ್ಟದ ಮೇಲೆ

ಇರುವ ಚಂದ್ರಮೌಳೀಶ್ವರನ ದರ್ಶನ ಮಾಡಲು ಪಲ್ಲಕ್ಕಿಯು ಪೂಜಾಗೃಹದ ಮುಂದೆ ಬರಬೇಕೆಂದೂ ಹೇಳಿದಳು. ದಾಸಿಯು ಎಲ್ಲವನ್ನೂ ಅಣಿಮಾಡಲು ಹೊರಟು ಹೋದಳು.

ಮಹಾರಾಣಿಯು ಅಜೀಜಾ ಬೇಗಮ್‌ನನ್ನು ತನ್ನಂತೆಯೇ ಸಿಂಗರಿಸಿದಳು. ಅಂದು ಕಸಿಮಲ್ಲಿಗೆ ಕಾಡುಮಲ್ಲಿಗೆಯಾದಳು! ಅವಳ ತುರುಬು ಬಿಗಿದು ಕುರುಳು ಕಾಣಿಸದಾಯಿತು. ಹಣೆಯಲ್ಲಿ ವೀರ ರಜಪೂತ ರಮಣಿಯರ ಅಡ್ಡ ಕುಂಕುಮವು ಬಂದಿದ್ದಿತು!

ದಾಸಿಯು ಬಂದು ಪಲ್ಲಕ್ಕಿಯು ಸಿದ್ಧವಾಗಿರುವದಾಗಿಯೂ, ಬೆಟ್ಟದ ತಪ್ಪಲಲ್ಲಿ ಕುದುರೆಯ ಗಾಡಿಯು ಕಾದಿರುವುದಾಗಿಯೂ ಹೇಳಿದಳು.

ಮಹಾರಾಣಿಯು ದಾಸಿಗೆ, 'ನೀನು ಇಲ್ಲಿನ ಯಾವ ಸಮಾಚಾರವನ್ನೂ ಯಾರೊಡನೆಯೂ ಉಸುರಬಾರದು' ಎಂದು, ಪೆಟ್ಟಿಗೆಯೊಂದರಿಂದ ಆಭರಣ-ಉಡುಗೊರೆಗಳನ್ನು ತೆಗೆದು, ಅವನ್ನು ಅವಳಿಗೆ ದಾನ ಮಾಡಿದಳು. 'ಬೇಕಾದ ನಿನ್ನ ಸಾಮಾನುಗಳನ್ನೆಲ್ಲಾ ತೆಗೆದುಕೊಂಡು ಬಾ ಅಜೀಜಾ! ನಿನ್ನನ್ನು, ನನ್ನ ನೆಚ್ಚಿನ ಆಳು ಜಯಸಿಂಹ, ನಿನಗೆ ಬೇಕಾದ ಕಡೆಗೆ ಕರೆದುಕೊಂಡು ಹೋಗಿ ಬಿಟ್ಟು ಬರುತ್ತಾನೆ' ಎಂದು ಹೇಳಿದಳು.

ಅಜೀಜಾ ಅರಮನೆಯ ತನ್ನ ಕೊಟಡಿಗೆ ಹೋಗಿ, ಸುವರ್ಣಾಭರಣಗಳನ್ನೂ, ಹಣವನ್ನೂ, ಒಂದೆರಡು ಬಟ್ಟೆ-ಒರೆಗಳನ್ನೂ ತೆಗೆದುಕೊಂಡು, ಬೂಂದಿ ರಾಣಿಯ ಕೊಟಡಿಗೆ ಬಂದಳು.

ಅವಕುಂಠನವತಿಯರಾದ ಇಬ್ಬರೂ ಪಲ್ಲಕ್ಕಿಯಲ್ಲಿ ಕುಳಿತು ಚಂದ್ರಮೌಳೀಶ್ವರನ ದೇವಾಲಯದ ಕಡೆಗೆ ಹೊರಟರು. ಬೆಟ್ಟದ ಮೇಲಿರುವ ದೇವಾಲಯದ ಹತ್ತಿರ ಬಂದಾಗ ಇಬ್ಬರೂ ಪಲ್ಲಕ್ಕಿಯಿಂದ ಇಳಿದು, ಪುನಃ ಮತ್ತೊಂದು ಕಡೆಯಿಂದ ಬೆಟ್ಟವನ್ನಿಳಿದು ಬಂದರು. ಸಿದ್ಧವಾಗಿದ್ದ ಕುದುರೆಯ ಗಾಡಿಯಲ್ಲಿ ಅಜೀಜಾ ಬೇಗಮ್ ಕುಳಿತಳು. ಗಾಡಿಯು ತೆರೆಯಿಂದ ಮುಚ್ಚಲ್ಪಟ್ಟಿತು. 'ಜಯಸಿಂಹ! ಇವರು ಇಷ್ಟಪಡುವ ಕಡೆಗೆ ಕರೆದು ಕೊಂಡು ಹೋಗಿ ಬಿಡು' ಎಂದು ಮಹಾರಾಣಿಯು ಹೇಳಿ ಅವನಿಗೆ ದಾರಿಗೆ ಹಣವನ್ನು ಕೊಟ್ಟಳು. ಗಾಡಿಯು ಹೊರಟಿತು.

ಚಂದ್ರಮೌಳೀಶ್ವರನ ಪೂಜೆಯನ್ನು ಮುಗಿಸಿಕೊಂಡು, ಅರಮನೆಗೆ ಪಲ್ಲಕ್ಕಿಯಲ್ಲಿ ಮಹಾರಾಣಿ ಹಿಂತಿರುಗಿದಳು.

—

೩

'ಬೇಗಮ್ ಸಾಹೇಬ ಒಳಗೆ ಇದ್ದಾರೆಯಾ?' ಎಂದು ಆತುರಾತುರವಾಗಿ ಮಹಾರಾಣನ ಕೊಟಡಿಯಿಂದ ಹೊರಟು ಬಂದ ದಾಸಿಯರಿಬ್ಬರಲ್ಲಿ ಒಬ್ಬಳು, ಬೇಗಮ್ ಸಾಹೇಬಳ ಕೊಟಡಿಯ ಮುಂದಿದ್ದ ದಾಸಿಯನ್ನು ಕೇಳಿದಳು. ಆಗ ತಾನೇ ಕತ್ತಲೆಯಾದುದರಿಂದ ದಾರಿ ತೋರಿಸಲು ಉರಿಯುತ್ತಿರುವ ಲಾಂದ್ರವನ್ನು ಮತ್ತೊಬ್ಬಳು ಹಿಡಿದಿದ್ದಳು.

'ಇದ್ದಾರೆ. ಅವರೂ ಮಹಾಸನ್ನಿಧಾನದ ಹತ್ತಿರ ಬರಲು ಸಿದ್ಧರಾಗುತ್ತಿದ್ದಾರೆ.' ಎಂದು ಹೇಳುವುದನ್ನು ದಾಸಿಯು ಮುಗಿಸುವಷ್ಟರಲ್ಲಿಯೇ ಕೊಟಡಿಯೊಳಗಿನಿಂದ ಸ್ವರ್ಣಾಂಬರವನ್ನುಟ್ಟು ಅವಕುಂಠನವತಿಯಾದ ಬೇಗಮ್ ಸಾಹೇಬ ಹೊರಗೆ ಬಂದಳು. ದಾಸಿಯರಿಬ್ಬರೂ ಮುಂದೆ ಹೊರಟರು. ಲಾಂದ್ರದ ಬೆಳಕಿನಲ್ಲಿ ಬೇಗಮ್ ಸಾಹೇಬ ಅವರನ್ನು ಹಿಂಬಾಲಿಸಿದಳು.

ಮಹಾರಾಣನ ಕೊಟಡಿಯ ಮುಂದೆ ಬೇಗಮ್ ಸಾಹೇಬ ಬಂದೊಡನೆಯೇ ಅಲ್ಲಿದ್ದ ಆಳು ಪರಾಕನ್ನು ಹೇಳಿದನು. ಮಹಾರಾಣನ ಅಲಂಕೃತ ಕೊಟಡಿಯಲ್ಲಿನ ತೆರೆಯ ಮರೆಯಲ್ಲಿದ್ದ ರಾಣಿಯರೆಲ್ಲಾ ಹೊರಟುಹೋದರು. ದೀಪವೊಂದು ಮುಸುಕುಮುಸುಕಾಗಿ ಮಹಾರಾಣನ ನಿದ್ರೆಗೆ ಭಂಗ ಬಾರದಂತೆ ಉರಿಯುತ್ತಿದ್ದಿತು.

ಬೇಗಮ್ ಸಾಹೇಬ ಕೊಟಡಿಯೊಳಕ್ಕೆ ಬಂದಳು. ಅಲ್ಲಿದ್ದ ಡಾಕ್ಟರು ಔಷಧಿಯನ್ನು ಒಂದು ಸುವರ್ಣದ ಬಟ್ಟಲಿನಲ್ಲಿ ಹಾಕಿ, 'ಇದನ್ನು ದಯವಿಟ್ಟು ಮಹಾರಾಣರಿಗೆ ಕೊಡಿ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಬರುತ್ತೇನೆ' ಎಂದು, ಹೊರಟು ಹೋದರು.

ಬೇಗಮ್ ಸಾಹೇಬ ಔಷಧದ ಬಟ್ಟಲನ್ನು ಹಾಸಿಗೆಯ ಮೇಲೆ ಮಲಗಿದ್ದ ಮಹಾರಾಣನ ಬಾಯಿಯ ಹತ್ತಿರ ತೆಗೆದುಕೊಂಡು ಹೋದಳು. ಜ್ಞಾನಪಲ್ಲಟನಾಗಿದ್ದ ಮಹಾರಾಣನು ಕಣ್ಣನ್ನರಳಿಸುತ್ತಾ 'ಯಾಕೆ ಅಜೀಜಾ ಇಷ್ಟು ಹೊತ್ತು ಮಾಡಿದೆ! ಎಲ್ಲಿ? ಔಷಧ ಕೊಡು. ನನಗೆ ವಾಸಿಯಾಗುತ್ತೆ. ನಿನ್ನ ಕೈಯಿಂದ ಬರುವುದು ಅಮೃತ' ಎಂದನು. ಮಹಾರಾಣನ ಶರೀರದ ಉಷ್ಣವನ್ನು ಸರಿಯಾಗಿಸಲು ಡಾಕ್ಟರು ಬಹುವಾಗಿ ಮದ್ಯವನ್ನು ಕುಡಿಸಿದ್ದರು. ಜತೆಗೆ ಮಹಾರಾಣನಿಗೆ ಜ್ಞಾನಪಲ್ಲಟ ಬೇರೆ ಆಗಿತ್ತು.

ಬೇಗಮ್ ಸಾಹೇಬ ಕೊಟ್ಟ ಔಷಧವನ್ನು ಮಹಾರಾಣ ಕುಡಿದನು. ಅವಳ ಬಲಗೈಯನ್ನು ತನ್ನ ಎರಡು ಕೈಗಳಿಂದಲೂ ಅಮುಕಿ ಹಿಡಿದುಕೊಂಡನು. 'ಇಂದೇನು ನಿನ್ನ ಕೈ ಮೊದಲಿನಷ್ಟು ಮೃದುವಾಗಿಲ್ಲ, ಅಜೀಜಾ! ನೀನು ದುಃಖದಿಂದ ಹೀಗೆ ಆಗಿದ್ದೀಯೆ!' ಎಂದನು. ಅವಳ ಕಣ್ಣುಗಳಿಂದ ತೊಟ್ಟಿಟ್ಟ ಬಿಸಿನೀರು ಮಹಾರಾಣನ ಕೈಮೇಲೆ ಬಿದ್ದಿತು. 'ಅಳಬೇಡ, ರಾಣಿ!' ಎಂದು ಅವಳ ಸೀರೆಯ ಕಡೆ ಕಣ್ಣನ್ನು ಹೊರಳಿಸಿ, 'ಓ! ಇಂದಾದರೂ ನಿನ್ನ ಮನಸ್ಸಿಗೆ ಬಂತಲ್ಲಾ ನನ್ನ ಉಡುಗೊರೆಯನ್ನು ಉಡಲು!' ಎಂದನು.

ಸ್ವಲ್ಪ ಹೊತ್ತು ನಿಶ್ಶಬ್ದ. ಮಹಾರಾಣನು, 'ಅಜೀಜಾ! ನನ್ನದೊಂದು ಪ್ರಾರ್ಥನೆ. ಅದನ್ನು ಸಲ್ಲಿಸಿಕೊಡುತ್ತೀಯಾ?' ಎಂದನು.

'ಊ' ಎಂದು ಆಕೆ ಹೇಳಿದಳು.

'ಜೀವಿತದಲ್ಲಿ ಹೇಗೆ ನನ್ನೊಡನೆ ಪ್ರೇಮದಿಂದಿದ್ದು ನನ್ನ ಪ್ರೇಮಕ್ಕೆಲ್ಲಾ ರಾಣಿಯಾಗಿದ್ದೆಯೋ ಹಾಗೆಯೇ ನನ್ನೊಡನೆ—ಒಂದು ವೇಳೆ ನಾನು ಸತ್ತರೂ—ಇರಬೇಕು.'

'ಊ'

'ವೀರ ಸತಿಯಂತೆ ಸತಿ ಮಾಡುತ್ತೀಯಾ?'

'ಊ'

'ಆಂ!' ಎಂದು ಮಹಾರಾಣನು ಚೀರಿದನು. ಈ ಧ್ವನಿಯನ್ನು

ಕೇಳಿದ ಡಾಕ್ಟರು ಹೊರಗಿನಿಂದ ಓಡಿ ಬಂದು ಮಹಾರಾಣನ ನಾಡಿಯನ್ನು ಮುಟ್ಟಿ ನೋಡಿದರು; ನಿಟ್ಟುಸಿರು ಬಿಟ್ಟರು.

ಉದಯಚಂದ್ರನು ಅಸ್ತಂಗತನಾದನು! ಆಕೆ ಕಣ್ಣನ್ನೊರಸಿಕೊಳ್ಳುತ್ತ, ತಲೆಯಮೇಲಿದ್ದ ಅವಕುಂಠನವನ್ನು ಮುಖದ ಮೇಲೆಳೆದುಕೊಂಡು ಹೊರಟು ಹೋದಳು.

*  *  *  *

ಮಧ್ಯಾಹ್ನ ಮೂರುಗಂಟೆಯ ವೇಳೆಗೆ ಶಾಸ್ತ್ರರೀತಿಯ ಎಲ್ಲಾ ಕರ್ಮಗಳು ಮುಗಿದ ಮೇಲೆ ಮಹಾರಾಣ ಉದಯಚಂದ್ರನ ಕಳೇಬರವನ್ನು ಅರಮನೆಯಿಂದ, ರಾಜಮನೆತನದ ಮಸಣವಾದ ವಸಂತವನಕ್ಕೆ ಬಿರುದುಬಾವಲಿಗಳೊಡನೆ ಮೆರವಣಿಗೆಯಿಂದ ತೆಗೆದುಕೊಂಡು ಹೋದರು. ಮಹಾರಾಣನ ರಾಣಿಯರೆಲ್ಲಾ ರೋದಿಸುತ್ತಿರಲು, ಬೂಂದಿ ರಾಣಿಯು ತನ್ನ ಎದೆಯನ್ನು ಹೊಡೆದುಕೊಳ್ಳುತ್ತಾ, 'ನಡೆಯಿರಿ ಮುಂದೆ ಸ್ವಾಮಿಯೊಡನೆ ಸಹಗಮನ ಮಾಡಿ ಸ್ವರ್ಗದಲ್ಲಿ ಆತನೊಡನೆ ಇರೋಣ' ಎಂದು ಎಲ್ಲರೊಡನೆಯೂ ಅರಮನೆಯ ಹೆಬ್ಬಾಗಿಲ ಬಳಿಗೆ ಬಂದಳು.

ಸತಿ ಅಥವಾ ಸಹಗಮನವು ನಿಲ್ಲಿಸಲ್ಪಟ್ಟಿದೆ ಎಂದು ಅಂದಿನ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟೆಂಕ್, ರಾಜ್ಯಶಾಸನವನ್ನು ಮಾಡಿದ್ದುದರಿಂದ, ಅಲ್ಲಿ ಸಹಗಮನವನ್ನು ನಿಲ್ಲಿಸಲು ಬಂದಿದ್ದ ಇಂಗ್ಲಿಷ್ ಸೈನ್ಯದೊಡನಿದ್ದ ಇಂಗ್ಲಿಷ್ ಕ್ಯಾಪ್ಟನ್ ಅರಮನೆಯ ಹೆಬ್ಬಾಗಿಲನ್ನು ಮುಚ್ಚಿ, ಸಾಲಾಗಿ ಸೈನ್ಯವನ್ನು ಪಹರೆ ಇಟ್ಟು ತಾನೂ ಬೀಗದ ಕೈಯೊಡನೆ ರಾಣಿಯರನ್ನು ಹೊರಗೆ ಬಿಡದೆ ನಿಂತಿದ್ದನು.

ರಾಣಿಯರೆಲ್ಲರೂ ಅರಮನೆಯೊಳಕ್ಕೆ ರೋದಿಸುತ್ತಾ ಹಿಂತಿರುಗಿದರು.

*  *  *  *

ಕತ್ತಲೆ ಎಲ್ಲೆಡೆಯನ್ನೂ ಆವರಿಸಿಕೊಂಡಿತ್ತು. ಅರಮನೆಯ ಮುಂಬಾಗಿಲ ಬಳಿ ಅವಕುಂಠನವತಿಯಾದ ರಮಣಿಯೊಬ್ಬಳು ಬಂದು ತಾನು ಹೊರಗೆ ಹೋಗಬೇಕೆಂದು ಹೇಳಿದಳು.

ಯಾವ ಅರಮನೆಯ ಹೆಂಗಸನ್ನೂ, ತಾನು ಮಹಾರಾಣರೊಡನೆ

ಸಹಗಮನ ಮಾಡಲು ಬಿಡುವುದಿಲ್ಲವೆಂದೂ, ರಾಜ್ಯಶಾಸನವನ್ನು ಪಾಲಿಸಲು ಕಂಕಣಬದ್ಧನಾಗಿರುವುದಾಗಿಯೂ ಕ್ಯಾಪ್ಟನ್ ಹೇಳಿದನು.

'ಓ ! ಸಹಗಮನವಾ !' ಎಂದು ತನ್ನ ಅವಕುಂಠನವನ್ನು ತಲೆಯ ಮೇಲೆಳೆದುಕೊಳ್ಳುತ್ತಾ ಹೇಳಿ, 'ನಾನು ಅಜೀಜಾ ಬೇಗಮ್, ಲಕ್ನೋದವಳು. ಮಹಾರಾಣರು ಬದುಕಿರುವಲ್ಲಿ ಈ ರಾಜ್ಯದ ರಾಣಿಯಂತೆ ರಾಣಿಯರನ್ನೆಲ್ಲಾ ದರ್ಪದಿಂದ ಆಳುತ್ತಾ ಮೆರೆದೆ. ಈಗ ನಾನಿಲ್ಲಿದ್ದರೆ ಈ ರಾಣಿಯರೆಲ್ಲಾ ದಾಸಿಯಂತೆ ನನ್ನನ್ನು ಆಳುವರು. ಅವರನ್ನು ಬಿಡದೆ ಅರಮನೆಯಲ್ಲಿರುವಂತೆ ಮಾಡಿ. ರೂಪವಿರುವ ನಾನು ಮತ್ತೆ ಯಾರಾದರೂ ಸರಿಯಾದವರನ್ನು ಹುಡುಕಿಕೊಂಡು ಹೊರಟಿದ್ದೇನೆ. ನನ್ನನ್ನು ಬಿಡಿ' ಎಂದು ನಕ್ಕಳು.

ಮಹಾರಾಣನು ಒಬ್ಬ ಲಕ್ನೋದ ರಮಣಿಗೆ ಮನಸೋತು, ಆಕೆ ಕೊಟ್ಟಿದ್ದನ್ನೆಲ್ಲಾ ಕುಡಿದು, ಆಕೆ ನಕ್ಕಾಗಲೆಲ್ಲಾ ನಕ್ಕು, ಆಕೆ ನಡೆದ ನೆಲವನ್ನು ಚುಂಬಿಸಿ, ತನ್ನ ರಾಣಿಯರನ್ನು ಆಕೆಯ ದಾಸಿಯಂತೆ ನೋಡುತ್ತಿದ್ದನೆನ್ನುವುದು ಎಲ್ಲರಿಗೂ ಗೊತ್ತಿತ್ತು.

ಆತ ಬಾಗಿಲನ್ನು ತೆಗೆದನು. ಸಾಲಾಗಿನಿಂತಿರುವ ಇಂಗ್ಲಿಷ್ ಸಿಪಾಯಿಗಳ ನಡುವೆ ಇದ್ದ ದಾರಿಯಲ್ಲಿ ಆಕೆ ನಡೆದುಹೋದಳು.

—

## ೪

ಸೂರ್ಯನು ಮುಳುಗಿ ಕತ್ತಲೆಯು ತನ್ನ ಪ್ರಭಾವವನ್ನು ಬೀರುವ ಹೊತ್ತಿಗೆ ಮಹಾರಾಣ ಉದಯಚಂದ್ರನ ಕಳೇಬರವನ್ನು ವಸಂತ ವನದಲ್ಲಿನ ಚಿತೆಯ ಮೇಲಿಟ್ಟರು. ಸೂರ್ಯವಂಶದ ರಾಜರು ತಮ್ಮ ಭೂ-ಜೀವನದ ಶೇಷಾಂಶವಾದ ದೇಹವನ್ನು ಅಗ್ನಿದೇವನಿಗರ್ಪಿಸಿ ಸ್ವರ್ಗಮುಖರಾಗುತ್ತಿದ್ದುದು ಆ ವಸಂತವನದಲ್ಲಿಯೇ. ಎಲ್ಲ ಕಾಲಗಳಲ್ಲಿಯೂ ಆವನ ವಸಂತವನ್ನು ನೆನಪಿಗೆ ತರುವಂತಿತ್ತು. ಎಲ್ಲ ಗಿಡ, ವೃಕ್ಷ-ಲತೆಗಳೂ ಆ ವನದಲ್ಲಿದ್ದುವು. ಗಿಡ-ಬಳ್ಳಿಗಳ ಮೇಲೆ ಬೀಸಿದ ಮಂದಮಾರುತವು ಅಲ್ಲಿರುವ ಯಾವ ಜೀವಿ

ಯನ್ನಾದರೂ ಆಹ್ಲಾದಿಸುತ್ತಿತ್ತು. ನವಿಲುಗಳು ಸಂಜೆಯಾದೊಡನೆಯೇ ಶ್ರಾವಣನಾಪದಂತೆ ಕುಣಿಯುತ್ತಿದ್ದುವು. ಕೋಗಿಲೆಗಳು ರಾತ್ರಿ-ಹಗಲೆನ್ನದೆ ಮರಗಳ ಮರೆಯಲ್ಲಿ ಕೂಗುತ್ತಿದ್ದುವು. ಕಪಿಗಳು ಒಂದು ಮರದಿಂದ ಮತ್ತೊಂದು ಮರಕ್ಕೆ ಹಾರುತ್ತಿದ್ದುವು. ವನದ ಪೂರ್ವದ ಕೊನೆಯಲ್ಲಿದ್ದ ಮಂಟಪದಿಂದ ಪಾರಿವಾಳಗಳು ಧ್ವನಿ ಮಾಡುತ್ತಿದ್ದುವು.

ಚಂದ್ರನು ಇನ್ನೂ ಉದಯಿಸಿರಲಿಲ್ಲ. ಉರಿಯುತ್ತಿದ್ದ ದೀಪಗಳ ಸಹಾಯದಿಂದ ಮಹಾರಾಣನ ಉತ್ತರಕ್ರಿಯೆಯು ಸಶಾಸ್ತ್ರವಾಗಿ ನಡೆಯುತ್ತಿತ್ತು.

ಭಟ್ಟರು ಬಂದರು. ' ಸೂರ್ಯವಂಶೋದ್ಭವಾ, ಆಂಗ್ಲಪ್ರಿಯಮಿತ್ರಾ, ವಿಶಾಲರಾಜ್ಯಸಾರ್ವಭೌಮಾ, ಬಿಕನೀರರಸಾ, ದೇವೇಂದ್ರನ "ಪದವಿಯನ್ನು ಹೋಗಿ ಪಡೆ ' ಎಂದು ಮಹಾರಾಣನ ಗುಣಗಾನವನ್ನು ಮಾಡಿದರು.

ಬೆಂಕಿ ಇಟ್ಟೊಡನೆಯೇ ಚಿತೆಯು ಉರಿಯಲು ಪ್ರಾರಂಭಿಸಿತು.

ಚಿತೆಯನ್ನು ಬಹಳ ವಿಶಾಲವಾಗಿ ಮತ್ತು ದೊಡ್ಡದಾಗಿ ಶ್ರೀಗಂಧದ ಕಾಷ್ಠದಿಂದ ನಿರ್ಮಿಸಿದ್ದರು. ಉರಿಯು ಆರಾವಳಿ ಬೆಟ್ಟದ ಮೇಲಿದ್ದ ಕಾಡುವಾಸಿಗಳಿಗೂ ಕಾಣಿಸುತ್ತಿದ್ದಿತು.

ಮಹಾರಾಣನ ಬಾಲ್ಯದ ಗೆಳೆಯ, ಅಂದಿನ ವರೆಗೂ ಅವನ ಜತೆಯಲ್ಲಿ ಇದ್ದ ಬೂಂದಿ ಮಹಾರಾಣರ ದ್ವಿತೀಯ ಪುತ್ರ, ಪ್ರಮೀಳೆಯ ತಂದೆ, ಮಹಾರಾಣಿಯ ಸೋದರ, ಠಾಕೂರಸಾಹೇಬ ಚಿತೆಗೆ ಸ್ವಲ್ಪ ದೂರದಲ್ಲಿ ನಿಂತು ತನ್ನ ಜೀವದ ಗೆಳೆಯನನ್ನು ನೆನೆಯುತ್ತಾ ತಲೆ ಬಗ್ಗಿಸಿ ಕಣ್ಣೀರು ಸುರಿಸುತ್ತಿದ್ದನು. ಅಂದು ಅವನು ಮಹಾರಾಣನೊಡನೆ ಬೇಟೆಯಾಡಲು ಹೋಗುತ್ತಿದ್ದಾಗ ಹಾಕುತ್ತಿದ್ದ ಉಡುಪನ್ನು ತೊಟ್ಟಿದ್ದನು. ಅದು ಮಹಾರಾಣನಿಂದ ಆತನಿಗೆ ಉಡುಗೊರೆಯಾಗಿ ಕೊಡಲ್ಪಟ್ಟದಾಗಿತ್ತು. ಅವನ ಸೊಂಟದಲ್ಲಿದ್ದ ಒರೆಯಲ್ಲಿ ಮಹಾರಾಣ ಉದಯಚಂದ್ರನು ತನ್ನ ಮದುವೆಯಲ್ಲಿ ರಾಜಪುತ್ರ ಧರ್ಮವನ್ನು ಕಾಪಾಡೆಂದು ಹರಸಿ ಕೊಟ್ಟಿದ್ದ ವಜ್ರದ ಪಿಡಿಯಿದ್ದ ಡಮಾಸ್ಕಸ್ಸಿನ ಕತ್ತಿಯಿತ್ತು.

ಚಿತೆಯು ಹತ್ತಿಕೊಂಡ ಸ್ವಲ್ಪ ಹೊತ್ತಾದೊಡನೆಯೇ ಅಲ್ಲಿಗೆ ಬಂದಿದ್ದ

ಇಂಗ್ಲಿಷರು ಮತ್ತು ಅನೇಕರು ಹೊರಟುಹೋದರು. ಮಹಾರಾಣನ ಹತ್ತಿರದ ಬಂಧುಗಳು ಕೆಲವರು ಮತ್ತು ಮಂತ್ರಿಯೇ ಮೊದಲಾದ ಉನ್ನತ ರಾಜಪುತ್ರ ಅಧಿಕಾರಿಗಳು ಮಾತ್ರ ಅಲ್ಲಿಯೇ ಇದ್ದರು.

ಪೂರ್ವದಿಕ್ಕಿನಲ್ಲಿದ್ದ ಮಂಟಪದಿಂದ ಸ್ವರ್ಣಾಂಬರವನ್ನುಟ್ಟ ಅವಕುಂಠನ ವತಿಯೊಬ್ಬಳು ನಿದಾನವಾಗಿ ಬಂದು, ಉರಿಯುತ್ತಿದ್ದ ಚಿತೆಯ ಮುಂದೆ ನಿಂತು, ಚಿತೆಗೆ ಕೈಜೋಡಿಸಿ ನಮಸ್ಕರಿಸಿದಳು. ಎಲ್ಲರೂ ಎವೆಯಿಕ್ಕದೆ ಆಕೆಯ ಕಡೆ ನೋಡಿದರು. ಠಾಕೂರ ಸಾಹೇಬನು ತಗ್ಗಿಸಿದ್ದ ತಲೆಯನ್ನು ಮೇಲಕ್ಕೆತ್ತಿದನು

ರಮಣಿಯು ಉಟ್ಟಿದ್ದ ಸ್ವರ್ಣಾಂಬರವು ಚಿತೆಯ ಪ್ರಜ್ವಲಿಸುವ ಬೆಳಕಿನಿಂದ ಹೊಳೆಯುತ್ತಿತ್ತು. ಆ ಸ್ವರ್ಣಾಂಬರದ ಒಡತಿ ಮಹಾರಾಣನ ಪ್ರೇಮ ಪುತ್ಥಳಿ ಎಂದು ಎಲ್ಲರೂ ಥಟ್ಟನೆ ಅರಿತರು.

ಆಕೆ ಉರಿಯುತ್ತಿದ್ದ ಅಗ್ನಿಯಲ್ಲಿ ಬೀಳಲು ಎರಡು ಸಲ ಮುಂದುವರಿದಳು. ಅವಳ ಮನಸ್ಸಿನ ಆಂದೋಳನದಿಂದ ಕೆಲಸ ಥಟ್ಟನೆ ಆಗದೆ, ನೋಡುತ್ತಿದ್ದ ರಾಜಪುತ್ರ ವೀರರಿಗೆ ಆಕೆ ಸಹಗಮನ ಮಾಡಲು ಹಿಂಜರಿಯುತ್ತಾ ಹೇಡಿಯಂತೆ ಇರುವಳೆಂದು ಭಾಸವಾಯಿತು.

ಠಾಕೂರ ಸಾಹೇಬನು 'ತಾಯೇ! ನನ್ನ ತಂಗಿ ಬೂಂದಿ ರಾಣಿಯು ಇಂದು ಬಂದು ಸಹಗಮನ ಮಾಡುವಳೆಂದಿದ್ದೆ. ಆದರೆ ರಾಜ್ಯಶಾಸನದ ಪ್ರಕಾರ ಆ ಪುಣ್ಯ ಅವಳಿಗೆ ಲಭಿಸದೆ, ಜೀವನದಲ್ಲಿ ಮಹಾರಾಣನನ್ನು ಆಳಿ, ರಾಣಿಗಿಂತಲೂ ಹೆಚ್ಚಾಗಿ ಮೆರೆದ ನೀನು ಇಂದು ಆತನೊಡನೆ ಸ್ವರ್ಗದಲ್ಲೂ ಸುಖವನ್ನು ಪಡೆಯಲು ಬಂದದ್ದು ಸಹಜವೇ ಆಗಿದೆ. ಅಯ್ಯೋ ಹುಚ್ಚಿ! ನೀನು ರಜಪೂತ ಸ್ತ್ರೀಯಲ್ಲ! ಆದಕ್ಕೇ ಹೀಗೆ ಹಿಂಜರಿಯುತ್ತೀ. ಹೋಗು. ಮಹಾರಾಣನೊಡನೆ, ನನ್ನ ಗೆಳೆಯನೊಡನೆ, ಇಲ್ಲಿ ಪ್ರೇಯಸಿಯಾಗಿದ್ದಂತೆಯೇ ಸ್ವರ್ಗದಲ್ಲಿಯೂ ಪ್ರೇಯಸಿಯಾಗು' ಎಂದು ಒರೆಯಲ್ಲಿ ಇದ್ದ ಖಡ್ಗವನ್ನು ತೆಗೆದು ಆಕೆಯ ಕಡೆ ಗುರಿಯಿಟ್ಟು ಬಿಸುಟನು. ಆ ಖಡ್ಗವು ಆಕೆಯ ನಡುವನ್ನು ಅರ್ಧ ಕತ್ತರಿಸಿ, ಅಲ್ಲಿಯೇ ಸಿಕ್ಕಿಕೊಂಡು, ಅದರ ಪೆಟ್ಟಿನ ವೇಗದಿಂದ ಅದೂ ಆಕೆಯೂ ಚಿತೆಯಲ್ಲಿ ಬಿದ್ದರು. ಚಿತೆಯಲ್ಲಿ ಬೀಳುವಲ್ಲಿ ಆಕೆ 'ಅಣ್ಣಾ!' ಎಂದು ಕೂಗಿದಳು.

'ಅಣ್ಣಾ!' ಎನ್ನುವ ಧ್ವನಿಯು ಕಿವಿಗೆ ಬಿದ್ದೊಡನೆಯೇ ರಾಕೂರ ಸಾಹೇಬನು ಸ್ತಂಭೀಭೂತನಾದನು. ಅದು ಒಂದೆರಡು ಕ್ಷಣಮಾತ್ರ. ಆಮೇಲೆ ಆತನ ದುಃಖಿತ ವದನದಲ್ಲಿ ಮುಗುಳುನಗೆಯು ಮಿಂಚಿತು. ಅವನು ಚಿತೆಯ ಸಮೀಪಕ್ಕೆ ಬಂದು, ಅದಕ್ಕೆ ಕೈಮುಗಿದು, 'ಖಡ್ಗ ವ್ಯರ್ಥವಾಗ ಲಿಲ್ಲ. ತಂಗೀ! ನೀನು ಧೀರೆ. ನಿನ್ನನ್ನು ನಿರ್ಲಕ್ಷಿಸಿದ ಮಹಾರಾಣನೊಡನೆ ಇಷ್ಟು ಕಷ್ಟಪಟ್ಟುಕೊಂಡು ಸಹಗಮನ ಮಾಡಲು ಬಂದ ನೀನೇ ವೀರ ರಜಪೂತ ರಮಣಿ. ಮೊದಲಿನಂತೆಯೇ ಆತನ ಪ್ರೇಮ ಪುತ್ಥಳಿಯಾಗಿದ್ದರೆ ಈ ನನ್ನ ಖಡ್ಗದ ಸಹಾಯವು ನಿನಗೆ ಬೇಕಾಗುತ್ತಿರಲಿಲ್ಲ. ಅಂತೂ ನನ್ನ ಖಡ್ಗವು ವ್ಯರ್ಥವಾಗಲಿಲ್ಲ. ರಜಪೂತ ಧರ್ಮವನ್ನೂ ಆತನ ಮನೆತನದ ಗೌರವವನ್ನೂ ಮಹಾರಾಣನು ಕೊಟ್ಟಿದ್ದ ಈ ಖಡ್ಗ ಉಳಿಸಿತು!' ಎಂದು ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಾ, ಆ ಖಡ್ಗದ ಒರೆಯನ್ನೂ ಉರಿಯು ತ್ತಿದ್ದ ಚಿತೆಯಲ್ಲಿಯೇ ಬಿಸಾಟನು. ರಾಜದಂಪತಿಗಳೊಡನೆ ಅದೂ ಅಗ್ನಿದೇವ ನಲ್ಲಿ ಐಕ್ಯವಾಯಿತು. ಉರಿಯು ಕಡಿಮೆಯಾಗುತ್ತ ಬಂದಿತು. ವನವೆಲ್ಲಾ ಶಾಂತಮಯವಾಗಿದ್ದಿತು.

ಚಂದ್ರನು ಆಕಾಶದಲ್ಲಿ ಉದಯಿಸಿದನು.



# ಗೋಧೂಳಿ ಲಗ್ನ

೧

' ಹನುಮಾ! ಹನುಮಾ! '

' ಬನ್ನಿ ಬುದ್ಧಿ ಒಳ್ಗೆ. ಅವ್ರು ಊಟ ಮಾಡ್ತಾ ಅವ್ರೆ ' ಎಂದು ಹನುಮನ ಹೆಂಡತಿ ಮನೆಯ ಮುಂದೆ ನಿಂತಿದ್ದ ಶ್ಯಾನುಭೋಗ ರಾಮಾಚಾರ್ಯರಿಗೆ ಹೇಳಿದಳು.

ಹನುಮ ಅಡಿಗೆ-ಮನೆಯಿಂದಲೇ, ' ಲೇ, ಈರಿ! ಐನೋರ್ಗೆ ಕಂಬ್ಳಿ ಹಾಸಿ ಕುಳ್ಳುತ್ಕೋ ಅಂತ ಹೇಳಿ. ಸ್ವಾಮಿ, ಬಂದು ಬಿಟ್ಟೆ ' ಎಂದನು.

' ನಿದಾನವಾಗಿ ಊಟ ಮಾಡಿ ಬಾ, ಹನುಮ ' ಎಂದು ರಾಮಾಚಾರ್ಯರು ಹೇಳುತ್ತಾ, ಮನೆಯೊಳಕ್ಕೆ ಬಂದು, ಈರಮ್ಮ ಹಾಸಿದ ಕಂಬಳಿಯ ಮೇಲೆ ಕುಳಿತು, ' ನಿನ್ನ ಮಕ್ಕಳು ಮುನಿಯ, ಸಿದ್ದಿ ಎಲ್ಲಿ? ' ಎಂದು ಕೇಳಿದರು.

' ಪಟೇಲ್ ರಂಗೇಗೌಡ್ರು ಮನೇಗೆ ಆಡೋಕೆ ಹೋಗವೆ ಮಕ್ಕಳು, ಬುದ್ಧಿ ' ಎಂದು ಈರಮ್ಮ ಹೇಳಿದಳು.

' ಈರಿ, ನಂಗೂ ಐನೋರ್ಗೂ ಎಲೆ-ಅಡಿಕೆ ಕೊಡೆ. ಅವ್ರು ಮನೆಗೆ ಒರೋದೆ ಅಪರೂಪ ' ಎನ್ನುತ್ತಾ ಹನುಮ ತಟ್ಟೆಯಲ್ಲಿಯೇ ಕೈತೊಳೆದುಕೊಂಡು, ಉಟ್ಟಿದ್ದ ಪಂಚೆಗೆ ಕೈ ಒರಸಿಕೊಳ್ಳುತ್ತಾ ಅಂಗಳಕ್ಕೆ ಬಂದು ಕಂಬಳಿಯ ಪಕ್ಕದಲ್ಲಿ ನೆಲದ ಮೇಲೆ ಕುಳಿತನು. ಈರಮ್ಮ ಎಲೆಯದೆಲೆ, ಬಟ್ಟಲಡಿಕೆ, ಸುಣ್ಣ, ಹೊಗೆಸೊಪ್ಪನ್ನು ತಂದು ಕಂಬಳಿಯ ಮೇಲಿಟ್ಟಳು.

' ಕಂಬಳಿ ಮೇಲಕ್ಕೆ ಬಾ, ಹನುಮ ' ಎಂದು ರಾಮಾಚಾರ್ಯರು ಹೇಳಿದರು.

'ಎಲ್ಲಾದ್ರೂ ಉಂಟೆ ಸ್ವಾಮಿ. ತಾವು ದೇವ್ರು. ನಾನು ನಿಮ್ಮ ಚಾಕ್ರು.'

'ಏನು ಚಾಕರ ಹನುಮ. ನಾವೆಲ್ಲಾ ಆ ಪರಮಾತ್ಮನ ಚಾಕರರು.'

'ಅದೌದು ಸ್ವಾಮಿ. ಆದ್ರೂ ಲೋಕದಾಗೆ ಅಂತಸ್ತಿಗೆ ತಕ್ಕಂತಿದ್ರೇನೇ ಮರ್ಯಾದೆ, ಬುದ್ಧಿ. ಎಷ್ಟಾದ್ರೂ ತಾವು ಗುರುಗಳು' ಎಂದು ಅಡಿಕೆಯನ್ನು ತೆಗೆದುಕೊಂಡು ಬಾಯಲ್ಲಿ ಹಾಕಿಕೊಂಡು ವೀಳೆಯದೆಲೆ ಹೊಗೆ-ಸೊಪ್ಪನ್ನು ತೆಗೆದುಕೊಂಡು ತನ್ನ ಅಂಗಿಯ ಜೇಬಿನಿಂದ ಸುಣ್ಣವನ್ನು ತೆಗೆದು ಎಲೆಗೆ ಹಚ್ಚುತ್ತಾ, ಅದನ್ನು ಒಂದೊಂದನ್ನಾಗಿ ಅಗಿಯಲು ಪ್ರಾರಂಭಿಸಿದನು. ರಾಮಾಚಾರ್ಯರೂ ಎಲೆ ಅಡಿಕೆಯನ್ನು ಸೇವಿಸಿದರು.

'ದೇವರ ಪಾದ ಇಷ್ಟು ದೂರ ಅಪರೂಪವಾಗಿ ಬಂತು?' ಎಂದು ಈರಮ್ಮ ಕೇಳಿದಳು.

'ಪಟೇಲ್ ರಂಗೇಗೌಡನ್ನ ನೋಡಿಕೊಂಡು ಹೋಗೋಣ ಅಂತ ಬಂದೆ. ಹಾಗೆಯೇ ನಿಮ್ಮನ್ನೂ ನೋಡಿಕೊಂಡು ಹೋಗೋಣ ಅಂತ ಮನಸ್ಸು ಬಂತು.'

'ನಮ್ಮ ಪುಣ್ಯ ಬುದ್ಧಿ! ಲಕ್ಷ್ಮಮ್ಮನ ಮದ್ವೆ ಎಂದು ಬುದ್ಧಿ?'

'ಇಷ್ಟರಲ್ಲೇ ಆಗುತ್ತೆ, ಈರಮ್ಮ' ಎಂದು ಏನೋ ಯೋಚನೆಯಲ್ಲಿ ಇದ್ದ ರಾಮಾಚಾರ್ಯರು ಹೇಳಿದರು.

'ಗಂಡನ್ನ ಗೊತ್ತು ಮಾಡಿದ್ದೀರಾ, ಬುದ್ಧಿ?' ಎಂದು ಹನುಮ ಕೇಳಿದನು.

'ಹೂಂ, ಹನುಮ. ನಾಗಸಂದ್ರದ ತಿರುಮಲೈಯ್ಯಂಗಾರ್ಯರ ಮಗ ಕೇಶವಮೂರ್ತಿಗೆ ಕೊಡಬೇಕೆಂದು ನಿಷ್ಕರ್ಷೆ ಆಗಿದೆ.'

'ಲಗ್ನ ಎಂದು ಬುದ್ಧಿ?' ಎಂದು ಈರಮ್ಮ ಉತ್ಸುಕತೆಯಿಂದ ಕೇಳಿದಳು.

'ಸರಿಯಾಗಿ ಎಂಟು ದಿನ ಇದೆ, ಈರಮ್ಮ! ಮುಂದಿನ ಶುಕ್ರವಾರ.'

'ಮದ್ವೇಗೆ ಸಾಮಾನೆಲ್ಲಾ ತಂದಾಯ್ತಾ ಬುದ್ಧಿ?' ಎಂದು ಹನುಮ ಕೇಳಿದನು.

'ಕಾಳು-ಕಡಿಯೆಲ್ಲಾ ತಂದಾಯ್ತು, ಹನುಮ. ಪಟೇಲ್ ರಂಗೇ ಗೌಡ ತನ್ನ ಎಲ್ಲಾ ಕಷ್ಟಾನೂ ಪಟ್ಟು ಇನ್ನೂರು ರೂಪಾಯಿ ಕೊಟ್ಟ. ಒಳ್ಳೇ ಹೊತ್ತಿನಲ್ಲಿ ಸಹಾಯಮಾಡಿದ ಹನುಮ. ಅದಿಲ್ಲದೆ ಹೋದರೆ ಮದುವೆ ಈ ವರ್ಷಾನೇ ಮಾಡೋಕೆ ಆಗ್ತಿರಲಿಲ್ಲ!'

'ಅವ್ರು ಮನೇನೇ ಹಂಗೆ, ಬುದ್ಧಿ; ಧರ್ಮರಾಯರಂತೋರು!'

'ಇನ್ನು ಜವಳಿ ಕೊಳ್ಳೋದು ಒಂದು ಬಾಕಿ' ಎಂದು ಹೇಳಿ, ರಾಮಾಚಾರ್ಯರು ಮಾತನ್ನು ನಿಲ್ಲಿಸಿದರು. ಮುಂದೆ ಯಾರೂ ಮಾತನ್ನು ಸ್ವಲ್ಪ ಹೊತ್ತು ಮುಂದುವರಿಸಲಿಲ್ಲ.

ಶ್ಯಾನುಭೋಗ ರಾಮಾಚಾರ್ಯರೇ ಮಾತನ್ನು ಮುಂದುವರಿಸಿ, 'ಮಿಕ್ಕ ಕಾರ್ಯ ನಿನ್ನಿಂದಾಗಬೇಕು, ಹನುಮ!' ಎಂದು ಹೇಳಿದರು.

ಹನುಮ ಯೋಚಿಸುತ್ತಾ 'ದೇವ್ರು ಇಂಥ ಕೆಲ್ಸಕ್ಕೆ ಸಹಾಯ ಮಾಡೋ ಭಾಗ್ಯ ನಂಗೆ ಕೊಡ್ಬೇಕು, ಬುದ್ಧಿ. ನೀವು ಎರಡು ವರ್ಷದ ಹಿಂದೆ ಒಳ್ಳೇ ಹೊತ್ನಾಗ, ಬರ್ದು ಕೂಡ ಕೊಡಬೇಡಾಂತ, ಬಡ್ಡಿ ಕೂಡ ಬೇಡಾಂತ ರೂಪಾಯಿ ಕೊಟ್ರಿ. ಸಪ್ಲಮ್ಮನ ಜಾತ್ರೆಗೆ ಜತೆ ಎತ್ತು ತಂದೆ. ನಿಮ್ಮಿಂದ್ಲೆ ಗಾಡಿ ಬಾಡಿಗ್ಗೆ ಹೊಡೆದು ಜೀವಿಸತವ್ನಿ' ಎಂದನು.

ಶ್ಯಾನುಭೋಗರ ಔದಾರ್ಯವನ್ನೂ ತಾನು ಅವರ ಹೊತ್ತಿಗೆ ಸಹಾಯಕನಾದ ಸ್ಥಿತಿಯನ್ನೂ ಕಂಡು ಹನುಮನ ಕಣ್ಣಿನಲ್ಲಿ ನೀರೂರಿತು. ಈ ಸ್ಥಿತಿಯನ್ನು ಕಂಡ ಈರಮ್ಮ ಏನನ್ನೂ ಮಾತನಾಡಲು ತೋಚದೆ ಕಂಬದಂತೆ ನಿಂತಿದ್ದಳು.

'ಬಡ್ಡಿ ಕೊಡದೆ ಹೋದ್ರೆ ಬಡ್ಡಿಗೆ ಎರಡರಷ್ಟು ಕೆಲಸ ಮಾಡಿದ್ದೀ, ಹನುಮ. ಹೊಲಗದ್ದೆ ಬಿಟ್ಟಿಯಾಗಿ ಉತ್ತುಕೊಟ್ಟಿದ್ದೀ. ಬೇಕಾದಾಗಲೆಲ್ಲಾ ಗಾಡಿ ಹೊಡಿದಿದ್ದೀ. ಈಗಲೂ ನಿನ್ನಲ್ಲಿ ಹಣ ಇಲ್ಲಾಂತ ನನಗೆ ಗೊತ್ತು. ಎಲ್ಲೂ ಸಿಕ್ಕಲಿಲ್ಲ, ಹನುಮ! ಜವಳಿ ಇಲ್ಲದೆ ಮದುವೆ ಹೇಗಾಗುತ್ತೆ? ಕನಿಷ್ಠ ಪಕ್ಷ ಹುಡುಗ ಅವನ ತಂದೆ-ತಾಯಿಗಳಿಗಾದರೂ ತೆಗೆಯಬೇಕು. ಸಾಲದ್ದಕ್ಕೆ ಅವರು ಪುಣ್ಯವಂತರು. ನಮ್ಮ ಕಷ್ಟ ಇದ್ದೇ ಇದೆ. ಲಕ್ಷ್ಮೀನಾದರೂ ಪುಣ್ಯವಂತರ ಮನೆಯಲ್ಲಿ ಸುಖವಾಗಿದ್ದರೆ ಸಾಕು.'

‘ ಲಕ್ಷ್ಮಮ್ಮನ ರೂಪಕ್ಕೆ ಎಂಥಾ ಪುಣ್ಯವಂತರಾದರೂ ಬರ್‍ತಾರೆ ಬುದ್ದಿ ’ ಎಂದು ಈರವ್ವ ಹೇಳಿದಳು.

‘ ಆಗ್ಲಿ ಬುದ್ದಿ ತಂದ್ಕೊಡ್ತೇನೆ ’ ಎಂದು ಹನುಮ ಹೇಳಿದನು. ಹನುಮನ ಮಾತನ್ನು ಕೇಳಿ ರಾಮಾಚಾರ್ಯರಿಗೆ ಮತ್ತು ಈರವ್ವನಿಗೆ ಆಶ್ಚರ್ಯವಾಯಿತು. ಈರವ್ವನಿಗೆ, ಮಾತುಕೊಟ್ಟು ಮದುವೆಯ ವೇಳೆಗೆ ಇಲ್ಲದೆ ಎಲ್ಲಿ ಅನರ್ಥವಾಗುವುದೋ, ತನ್ನ ಗಂಡ ಹೇಗೆ ಹಣ ತಂದುಕೊಡುವನು ಎಂಬ ಯೋಚನಾತರಂಗಗಳು ಮನಸ್ಸಿನಲ್ಲಿ ಮೂಡಿ, ‘ ಹೇಗ್ತಂದು ಕೊಡ್ತೀ ಹಣಾನ? ಇದ್ದ ಒಂದೊಡ್ವೆ ಅಡ್ವಿಕ್ಕೇನೂ ಮಾರಿ ಹೋದ್ವರ್ಷ ಗಾಡಿ ತಂದೆ. ಲಗ್ನದ ಹೊತ್ನಾಗ ಆಸೆ ತೋರ್‍ಸಿ ಎಲ್ಲಾದ್ರೂ ಕೆಡ್ಸೀಯಾ, ಜೋಕೆ ! ’ ಎಂದಳು.

ಹನುಮ ಈರವ್ವನ ಮಾತನ್ನು ಕೇಳಿ ನಕ್ಕ. ‘ ಅವರು ಯಾವುದಕ್ಕೆ ಕೊಟ್ರೋ ಅದನ್ನೇ ಮಾರಿ ತಂದ್ಕೊಡ್ತೇನೆ, ಈರಿ. ಈಗ ಯಾರಾದ್ರೂ ಇನ್ನೂರು ರೂಪಾಯಿ ಕೊಡ್ತಾರೆ ಅಲ್ಲೆ ಬುದ್ದಿ? ’ ಎಂದು ಕೇಳಿದ.

‘ ಇನ್ನೂರೇಕೆ ಇನ್ನೂ ಹೆಚ್ಚಾಗಿ ಕೊಡ್ತಾರೆ, ಹನುಮ ’

‘ ಗಾಡಿಗೇನು ಮಾಡ್ತಿ ? ’ ಎಂದು ಈರವ್ವ ತನ್ನ ಸಂಸಾರದ ಮುಂದಿನ ಪಾಡನ್ನು ಯೋಚಿಸಿ ಕೇಳಿದಳು.

‘ ಎಪ್ಪತ್ತೈದರಾಗ ಯಾವುದಾದರೂ ಜತೆ ಪಡ್ದೆ ತಂದರಾಯ್ತು.’

ರಾಮಾಚಾರ್ಯರ ಕುಗ್ಗಿದ್ದ ಮುಖದಲ್ಲಿ ಗೆಲುವಿನ ಕಳೆಯು ಬಂದಿತು. ಆದರೂ ‘ ರುಸ್ತುಂ ’ ಜತೇನ ಮಾರ್‍ತೀಯಲ್ಲಾ ಹನುಮ ! ಈ ಪಟ್ಟೇಲೇ ಅಂತ ಎತ್ತರವಾದ ಬಿಳಿ ಬಣ್ಣದ, ತುಂಬಿಕೊಂಡಿರುವ ಎತ್ತುಗಳೇ ಇಲ್ಲ. ಅವುಗಳ ಕೊಂಬೇ ಎಷ್ಟು ಮಾಟವಾಗಿವೆ ನೋಡು ! ’ ಎಂದು ಹೇಳಿದರು.

‘ ನಮ್ಮ ಲಕ್ಷ್ಮಮ್ಮನ ಮದ್ವೆ ನನ್ನ ಎತ್ತಿಗಿಂತ ಜಾಸ್ತಿ, ಬುದ್ದಿ. ಈ ಜತೆ ಹೋದ್ರೆ ನಾಳೆ ಬೇರೆ ಜತೆ ತಂದು ಹೀಗೇ ಸಾಕ್ತೇನೆ. ನಮ್ಮ ಲಕ್ಷ್ಮಮ್ಮನಿಗೆ ದೇವ್ರುಂತ ಪುಣ್ಯವಂತರ ಮನೆ ಸಿಕ್ಕೋದು ಹೇಳಿ, ಬುದ್ದಿ. ’

‘ ಎಲ್ಲಾ ನಿಮ್ಮಂಥಾವ್ರ ವಿಶ್ವಾಸದಿಂದ ಕಾರ್ಯ ನಡೀಬೇಕು, ಹನುಮ. ’

' ನೋಡಿ ಬುದ್ಧಿ! ಸೋಮವಾರ ಆವಣಿ ಪರಷೆ ಆರಂಭ. ಬುಧವಾರದ ವೇಳ್ಗೆ ಎತ್ತೆಲ್ಲಾ ಸೇರ್‍ತದೆ. ಎತ್ನ ಮಾಡಿ ಮಾರಿ ಬುಧವಾರ ರಾತ್ರಿ ಇಲ್ವೆ ಗುರುವಾರ ಮಧ್ಯಾಹ್ನದ ವೇಳ್ಗೆ ಹಣ ಕೊಡ್ತೇನೆ ಬುದ್ಧಿ. '

' ಗುರುವಾರವಾದರೂ ಪರವಾ ಇಲ್ಲ, ಹನುಮ. ನನ್ನ ತಮ್ಮ ಆಳ್ವಾರಪ್ಪನ್ನ ಕೋಲಾರಕ್ಕೆ ಕಳುಹಿಸಿ ಸಂಜೆ ವೇಳೆಗೆ ಜವಳಿ ತರಿಸ್ತೇನೆ. '

' ಆಗಲಿ ಬುದ್ಧಿ ' ಎಂದು ಹನುಮ ಹೇಳಿದನು.

ರಾಮಾಚಾರ್ಯರು ' ನೀವೆಲ್ಲಾ ಖಂಡಿತ ಮದುವೆಗೆ ಬರಬೇಕು. ಈರಮ್ಮ! ಊರು ಮೂರು ಮೈಲಿ ದೂರ ಇದೆ ಅಂತ ನೀವೆಲ್ಲಾ ನಿಲ್ಲಬೇಡಿ' ಎಂದರು.

' ಎಲ್ಲಾದ್ರೂ ಉಂಟೆ ಬುದ್ಧಿ. ಖಂಡಿತ ಲಕ್ಷ್ಮಮ್ಮನ ಮದ್ವೇಗೆ ಒರ್‍ತೀವೆ ' ಎಂದು ಈರಮ್ಮ ಹೇಳಿದಳು.

ಆಚಾರ್ಯರು ತೃಪ್ತರಾಗಿ ತಮ್ಮೂರಿನ ಕಡೆ ಹೊರಟರು.

ರಾಮಾಚಾರ್ಯರು ಮೂರು ಊರುಗಳ ಶ್ಯಾನುಭೋಗರು. ತನ್ನ ಜನ ಬಂಧು ಬಳಗ ಇರುವ ಊರೂ ಆದ ಕೋಡಿಯೂರಲ್ಲಿಯೇ ಇದ್ದು ತಮ್ಮ ಮತ್ತೆರಡು ಗ್ರಾಮಗಳಾದ ಹೊಸಹಳ್ಳಿ, ರಾಮಾಪುರಗಳಿಗೆ ಆಗಾಗ ಕಂದಾಯ ಕೌಳಿಗೆ ವಸೂಲಿಗೆ ಬರುತ್ತಿದ್ದರು.

ತಾವು ಹಿಂದೆ ಎತ್ತಿಗಾಗಿ ರಾಮಾಪುರದ ಹನುಮನಿಗೆ ಕೊಟ್ಟಿದ್ದ ಹಣ ವನ್ನು ಮದುವೆಗಾಗಿ ಕೇಳಲು ಅಂದು ರಾಮಾಚಾರ್ಯರು ಬಂದಿದ್ದರು. ಹನುಮನ ಸ್ಥಿತಿ ತಿಳಿದಿದ್ದರೂ ಎಲ್ಲೂ ಹಣ ಸಿಕ್ಕದೆ ವಿಧಿಯಿಲ್ಲದ್ದರಿಂದ ಅವರು ಅವನಿಂದ ಹೇಗಾದರೂ ಅದನ್ನು ಪಡೆಯಬೇಕೆಂದು ನಿರ್ಧರಿಸಿದ್ದರು. ಅವರ ನಿರ್ಧಾರದಂತೆಯೇ ಹನುಮನ ಮಾತೂ ಸರಿದೂಗಿತು.

ರಾಮಾಚಾರ್ಯರು ಹೋದ ಮೇಲೆ ಮನೆಯಲ್ಲಿ ಹನುಮ ಈರಮ್ಮ ಒಬ್ಬರ ಮುಖವನ್ನೊಬ್ಬರು ನೋಡಿದರು. ಈರಮ್ಮ ' ಒಳ್ಳೇ ಮಾತೇ ಹೇಳಿದ್ರಿ. ಮದ್ವೇಗೆ ನಾವು ಸಹಾಯಮಾಡಿದ್ರೆ ದೇವ್ರು ನಮ್ಗೂ ಸಹಾಯ ಮಾಡ್ತಾನೆ ' ಎಂದು ಇನಿಯನ ಕಾರ್ಯವನ್ನು ಮೆಚ್ಚಿ ನುಡಿದಳು.

' ದೇವ್ರು ನಮ್ಮ ಕೆಲ್ಸಾನಾ ಒಪ್ಪಿದ್ರೆ ಸಾಕು, ಈರಿ ' ಎಂದು ಹನುಮ,

ಗೋಡೆಗೆ ನೇತು ಹಾಕಿದ್ದ ಅವನ ಮನೆ ದೇವರು ಶ್ರೀನಿವಾಸ ಸ್ವಾಮಿಯ ಪಟಕ್ಕೆ ಕೈಮುಗಿಯುತ್ತಾ ಹೇಳಿದನು.

—

೨

ಬುಧವಾರ ಬೆಳಗ್ಗೆ ಏಳುಗಂಟೆಯ ವೇಳೆಗೆ ಈರಮ್ಮ ಅಡಿಗೆ ಸಿದ್ಧಪಡಿಸಿದ್ದಳು. ಹನುಮ ಊರ ಮುಂದಿನ ಕೆರೆಯಲ್ಲಿ ಸ್ನಾನ ಮಾಡಿಕೊಂಡು ಬಂದವನು, ಒದ್ದೆ ಬಟ್ಟೆಯಲ್ಲಿಯೇ ಗೋಡೆಗೆ ನೇತು ಹಾಕಿದ್ದ ಶ್ರೀನಿವಾಸ ದೇವರ ಪಟಕ್ಕೆ ಈರಮ್ಮ ಕಟ್ಟಿದ ತನ್ನ ತೋಟದ ಹೂವಿನ ಹಾರವನ್ನು ಹಾಕಿ ಸಾಂಬ್ರಾಣಿ ಕಡ್ಡಿಯನ್ನು ಹತ್ತಿಸಿ ಅದಕ್ಕೆ ಸಿಕ್ಕಿಸಿ, 'ಕಾಪಾಡಪ್ಪಾ ! ತಿಮ್ಮಪ್ಪಾ ! ' ಎಂದು ಕೈಮುಗಿದು, ' ಈರಿ ! ಎತ್ತುಗಳಿಗೆ ಹರಿಸಿನ ಕುಂಕುಮ ಇಟ್ಟು ಹಾರ ಹಾಕೆ. ನಮ್ಮ ಮನೆ ಬಿಟ್ಟು ಹೋಗೋ ದೇವ್ರುವು ! ' ಎಂದನು.

ಈರಮ್ಮ ಮನೆಯ ಮುಂದಿದ್ದ ತೆಂಗಿನ ಜೋಪಡಿಯಲ್ಲಿ ಹಸುಗಳ ಪಕ್ಕದಲ್ಲಿ ಕಟ್ಟಿದ್ದ ಎರಡು ಎತ್ತುಗಳ ಹಣೆ ಕಾಲುಗಳಿಗೂ ಹರಿಸಿನ ಕುಂಕುಮ ಇಟ್ಟು, ಅವುಗಳ ಕೊರಳಿಗೆ ತನ್ನ ತೋಟದಲ್ಲಿ ಬೆಳೆದು, ತಾನೇ ಕೈಯ್ಯಾರ ಕಟ್ಟಿದ್ದ ಪುಷ್ಪಮಾಲೆಗಳನ್ನು ಹಾಕಿದಳು. ಆ ಎತ್ತುಗಳು ಅವಳ ಕಡೆ ದೈನ್ಯ ದೃಷ್ಟಿಯನ್ನು ಬೀರಿದಂತೆ ಕಂಡಳು. ಅವಳ ಕಣ್ಣುಗಳು ನೀರಿನಿಂದ ತುಂಬಿದುವು.

ಹನುಮ, ಈರಮ್ಮ ಅವರ ಮಕ್ಕಳು ಎಲ್ಲಾ ಊಟವನ್ನು ಮಾಡಿ ಮುಗಿಸಿದರು. ಊಟವಾದೊಡನೆಯೇ ಮಕ್ಕಳಿಬ್ಬರೂ ಪಟೇಲ್ ರಂಗೇಗೌಡನ ಮನೆಗೆ, ಆ ಮನೆಯ ಮಕ್ಕಳೊಡನೆ ಆಟವಾಡಲು ಹೊರಟು ಹೊದುವು.

' ನಾನೂ ನಿನ್ನೊಡನೆ ಸೀತಮ್ಮ ಇದ್ದ ಪುಣ್ಯಸ್ಥಳಾನ ನೋಡೋಕೆ ಬರ್ತೀನೆ ' ಎಂದು ಈರಮ್ಮ ಗಂಡನಿಗೆ ಹೇಳಿದಳು.

' ಆಗಲಿ, ಬಾ '

ಈರಮ್ಮನಿಗೆ ಹನುಮನ ಅಂದಿನ ಉತ್ತರವನ್ನು ಕೇಳಿ ಆಶ್ಚರ್ಯವಾಯಿತು. ಎಂದೂ ಹನುಮ ಈರಮ್ಮ ಹೇಳಿದುದಕ್ಕೆಲ್ಲಾ ಪ್ರತಿ ಹೇಳಿ ವಾದಿಸಿ ಅವಳನ್ನು ಕಾಡಿಸುತ್ತಿದ್ದ. ಇಂದು ತನ್ನ ಮನೆ-ದೇವರುಗಳನ್ನು ಕಳುಹಿಸಲು ಪತ್ನಿಯೂ ಜತೆಯಲ್ಲಿರಲೆಂದೂ, ಅವು ಮನೆ ಬಿಟ್ಟು ಹೋಗುವಲ್ಲಿ ತನಗೆಷ್ಟು ದುಃಖವೋ ಆಕೆಗೂ ಅಷ್ಟೇ ದುಃಖವೆಂದೂ ತಿಳಿದು ಆತ ಹಾಗೆ ಹೇಳಿರಬಹುದು.

'ಹಾಗಾದರೆ ರಂಗೇಗೌಡನ ಹೆಂಡ್ತೀಗೆ ಮಕ್ಕಳನ್ನ ನಾಳೆವರೆಗೂ ನೋಡಿಕೊಳ್ಳೋದಕ್ಕೆ ಹೇಳಿ ಬರ್‍ತೀನೆ.'

'ಈರಿ! ಈ ದಿನ ಸಂಜೀನೆ ಬಂದು ಬಿಡ್ತೀವೆ ಅನ್ನು. ಆಗದಿದ್ದರೆ ನಾಕೆ ಬೆಳಗ್ಗೆ ಬಂದು ಬಿಡೋಣ.'

'ಹಂಗೇ ಹೇಳಿ ಬರ್‍ತೀನೆ'

'ಆ ಐಕಳಿಗೆ ಗುಟ್ಟು ತಿಳೀತೋ ಅಳ್ತವೆ. ಸದ್ದು ಮಾಡ್ದೆ ಬೇಗ ಬರ್‍ಬೇಕು.'

'ನಂಗೆ ಹೇಳ್ಬೇಕಾ!' ಎಂದು ಜಾತ್ರೆಗೆ ಹೋಗುವ ಉತ್ಸುಕತೆಯಿಂದ ಆಕೆ ಹೇಳಿ, ಗೌಡರ ಮನೆಗೆ ಹೋಗಿ ಬಂದಳು.

ಹನುಮ ತನ್ನ ಜತೆ ಎತ್ತುಗಳನ್ನು ಜಾತ್ರೆಗೆ ತೆಗೆದುಕೊಂಡು ಹೋಗಲು, ಮನೆಯ ಮುಂದಕ್ಕೆ ಅವನ್ನು ತಂದ. ಮೊದಲೇ ಸೊಗಸಾದ, ಮೈ ತುಂಬಿಕೊಂಡಿದ್ದ, ಹೊಳೆಯುವ ಕಣ್ಣುಗಳಿಂದಲೂ ಕತ್ತಿನಲ್ಲಿ ಗೆಜ್ಜೆಯ ಮಾಲೆಗಳಿಂದಲೂ ಇದ್ದ ಎತ್ತುಗಳು, ಅಂದು ಈರಮ್ಮನಿಂದ ಪೂಜಿಸಲ್ಪಟ್ಟು ಹಣೆಯಲ್ಲಿ ಕಾಲುಗಳಲ್ಲಿ ಹರಿಸಿನ ಕುಂಕುಮದೊಡನೆ ಕೂಡಿ ಕೊರಳಲ್ಲಿ ಪುಷ್ಪಮಾಲೆಗಳಿಂದಿದ್ದ ಅವು ಪರಮೇಶ್ವರನ ನಂದಿಯಂತಿದ್ದುವು. ಈರಮ್ಮ ಮನೆಯೊಳಗಿನಿಂದ, ಯಾರಾದರೂ ಬಂದರೆ ಕೆಳಗೆ ಹಾಸಲು ಇಟ್ಟಿದ್ದ ಬಿಳಿಯ ಕಂಬಳಿಯನ್ನು ತೆಗೆದುಕೊಂಡು, ಅದರ ನಡುವಿದ್ದ ಹೊಲಿಗೆಯನ್ನು ಬಿಚ್ಚಿ, ಎರಡು ಪಟ್ಟೆಗಳನ್ನೂ ಬೇರೆ ಮಾಡಿ, ಒಂದೊಂದು ಎತ್ತಿನ ಮೇಲೆ ಒಂದೊಂದು ಪಟ್ಟೆಯನ್ನು ಹಾಸಿದಳು.

'ಇದೇನೆ?' ಎಂದು ಹನುಮ ಆಶ್ಚರ್ಯದಿಂದ ಕೇಳಿದನು.

'ಇವಕ್ಕೆ ಮಳೆ ಬಿಸಿಲು ಇಲ್ವಾ, ಈ ಬಿಸಿಲ್ನಾಗ ಹನ್ನೆರಡು ಮೈಲಿ ನಡಿಬೇಕಾದ್ರೆ ಅವು?' ಎಂದು, ಕಂಬಳಿಗೆ ಕವಡೆ ಕಟ್ಟಿದ್ದ ಕೆಂಪು ರೇಷ್ಮೆಯ

ಎಳೆಯನ್ನು ಮುಟ್ಟಿ ನೋಡುತ್ತಾ, ತನ್ನ ಎತ್ತುಗಳ ಅಂದವನ್ನು ನೋಡಿ ಮನದಲ್ಲೇ ಮೆಚ್ಚಿಕೊಳ್ಳುತ್ತಾ ಹೇಳಿ, 'ನಾವಂದು ನೋಡಿದ ಮೈಸೂರಾಗ ಗೋಕಲ್ಲಾಷ್ಟಮಿ ಹಬ್ಬದಾಗ ಮಹಾರಾಜರ ಗೋವುಗಳು ಮೆರವಣ್ಗೆ ಹೋದಾಗ ಇದ್ದಂಗೆ ಇವೆ ಅಲ್ವೆ ನಮ್ಮ ಎತ್ಗಗಳೂ ಈಗ!' ಎಂದು ಓರೆಗಣ್ಣಿನಿಂದ ಹನುಮನನ್ನು ನೋಡುತ್ತಾ ಈರಮ್ಮ ಹೇಳಿದಳು.

ಹನುಮ ಅವಳ ಕೆನ್ನೆಯ ಮೇಲೆ ಮೆಲ್ಲನೊಂದು ಏಟು ಕೊಟ್ಟು ಮುಖದಲ್ಲಿ ಮುಗುಳುನಗೆಯನ್ನು ಸೂಸಿದನು.

---

೨

ಗುರುವಾರ ಮಧ್ಯಾಹ್ನ ಹನ್ನೆರಡು ಗಂಟೆಯ ವೇಳೆಗೆ ಶ್ಯಾನುಭೋಗ ರಾಮಾಚಾರ್ಯರ ಮನೆಯಲ್ಲಿ ಬಂದಿದ್ದ ಬೀಗರು, ಬಂಧುಗಳು, ಮನೆಯವರು ಎಲ್ಲಾ ಗಂಡಸರಿಗೂ ಊಟ ಮುಗಿದಿತ್ತು. ರಾಮಾಚಾರ್ಯರ ಮನೆ ಪಶ್ಚಿಮದ ಕಡೆ ಬಾಗಿಲಿದ್ದ ಬಹು ಪುರಾತನ ಮನೆ. ಅವರ ವಂಶಸ್ಥರು ಹಿಂದೆ ಬಹು ಪುಣ್ಯವಂತರಾಗಿ ಅನೇಕ ಕೊಟಡಿಗಳನ್ನುಳ್ಳ ದೊಡ್ಡ ತೊಟ್ಟಿ-ಮನೆಯನ್ನು ಕಟ್ಟಿಸಿದ್ದರು. ಮನೆಯ ಮುಂಭಾಗದಲ್ಲಿ ಎತ್ತರವಾದ ಮುಂಬಾಗಿಲ ಎರಡು ಕಡೆಗಳಲ್ಲಿಯೂ ವಿಶಾಲವಾದ ಜಗುಲಿಗಳಿದ್ದುವು. ರಸ್ತೆಯಿಂದ ಮನೆಯೊಳಕ್ಕೆ ಬರಲು ಮೆಟ್ಟಲುಗಳಿದ್ದುವ. ರಾಮಾಚಾರ್ಯರ ತಂದೆ ಮತ್ತು ಅವರ ಐದು ತಮ್ಮಂದಿರೂ ಬೇರೆಬೇರೆಯಾದುದರಿಂದ ಪ್ರತಿಯೊಬ್ಬರಿಗೂ ಆಸ್ತಿಯ ಸ್ವಲ್ಪ ಸ್ವಲ್ಪ ಭಾಗ ಬಂದಿತ್ತು. ಪೂರ್ಣ ಆಸ್ತಿ ಅವಿಭಕ್ತ ಕುಟುಂಬವಾಗಿದ್ದಾಗ ಇದ್ದ ಬಿಂಕ, ಬೇರೆಯಾದ ಮೇಲೆ ಬಯಲಾಯಿತು. ರಾಮಾಚಾರ್ಯರ ತಂದೆ ಮನೆಯ ಮೊದಲನೆಯ ಮಕ್ಕಳಾಗಿದ್ದುದರಿಂದ ಅವರಿಗೆ ಮೂರು ಗ್ರಾಮಗಳ ಶಾನುಭೋಕಿಯು ಬಂದು, ಅವುಗಳಿಂದ ಬರುವ ಮೋಟಿಕೆ ನೂರ ಹತ್ತು ರೂಪಾಯಿಗಳು ಕಂದಾಯಕ್ಕಾಗಿ, ಜಮೀನಿನಿಂದ ಬರುವ ದವಸ ಧಾನ್ಯ ಜೀವನಕ್ಕಾಗುತ್ತಿತ್ತು. ಎರಡುವರ್ಷಗಳಿಂದ ಕೆರೆ ತುಂಬದಿದ್ದುದರಿಂದ ಕಂದಾಯವೂ ಕಟ್ಟಿ ಫಸಲೂ ಬರದೆ ಅವರ ಪಾಡು ಬಹಳ ಕಷ್ಟಕ್ಕೆ ಬಂದಿತ್ತು.

ಇಂತಹ ಹೊತ್ತಿನಲ್ಲಿಯೇ ಅವರ ಸೀಮಂತ ಪುತ್ರಿ ಲಕ್ಷ್ಮೀದೇವಿಯ ಮದುವೆ.

ಊಟ ಮುಗಿಸಿಕೊಂಡು ಗಂಡಸರೆಲ್ಲಾ ಮನೆಯ ಮುಂದಿದ್ದ ವಿಶಾಲವಾದ ಜಗುಲಿಗಳ ಮೇಲೆ ಹಾಸಿದ್ದ ಕಂಬಳಿ ಚಾಪೆಗಳ ಮೇಲೆ ಕುಳಿತು, ಕೊಟ್ಟಿದ್ದ ಗಂಧವನ್ನು ಚೆನ್ನಾಗಿ ಕೈ ಮತ್ತು ಹೊಟ್ಟೆಗಳಿಗೆ ತೀಡಿ, ಜುಟ್ಟುಗಳಿಗೆ ಪೂ ಮುಡಿದು ವೀಳೆಯದೆಲೆಯನ್ನು ಮೆಲ್ಲುತ್ತಿದ್ದರು. ರಾಮಾಚಾರ್ಯರು ಅವರ ಬೀಗರು ತಿರುಮಲ ಅಯ್ಯಂಗಾರ್ಯರ ಪಕ್ಕದಲ್ಲಿ ಕುಳಿತಿದ್ದರು ಅವರಿಬ್ಬರನ್ನೂ ಚಿಂತಾದೀಪ ದಾಸರನ್ನಾಗಿ ಮಾಡಿಕೊಂಡಿದ್ದಳು.

'ಕೇಶವೂ ಇನ್ನೂ ಬರಲಿಲ್ಲ!' ಎಂದು ರಾಮಾಚಾರ್ಯರು ತಿರುಮಲ ಅಯ್ಯಂಗಾರ್ಯರಿಗೆ ಹೇಳಿದರು.

'ಬಂದು ಬಿಡ್ತಾನೆ. ನಮ್ಮ ಜತೇಲೆ ಬಾ; ನಿಮ್ಮ ತಾಯೀನ ಕಳುಹಿಸಿ ಕೊಡ್ತೇನೆ ನಿಮ್ಮ ತಾತ–ಆ ದೂರ್ವಾಸರ–ಮನೆಗೆ ' ಎಂದು ಅವನಿಗೆ ಹೇಳಿದರೂ, ಅವಳೂ ಅವನೂ ಮಾತನಾಡಿಕೊಂಡು, ಅಜ್ಜಿ ಅಜ್ಜನ್ನ ಕರಕೊಂಡು ಬರಲು ಅವನೇ ಹೋಗಿದ್ದಾನೆ. '

'ಅವರೇ ಅಂದು ನಿಮ್ಮ ಮನೆಯವರ ಜತೇಲಿ ಹುಡುಗನೊಡನೆ ಬಂದು ಲಗ್ನ-ಪತ್ರಿಕೆ ಮಾಡಿಕೊಂಡು ಹೋದರು ! '

'ಹೋದರು, ರಾಮಾಚಾರ್ಯರೇ, ನನ್ನ ತಮ್ಮ ಲಗ್ನ-ಪತ್ರಿಕೆ ಅಚ್ಚು ಹಾಕಿಸೋವಲ್ಲಿ ತಪ್ಪು ಮಾಡಿಬಿಟ್ಟ ನೋಡಿ. ಅದೇ ಅವರಿಗೆ ಕೋಪ '

'ಅವರ ಹೆಸರೇ ಹಾಕಿಸಬಹುದಾಗಿತ್ತು! '

'ನನ್ನ ತಮ್ಮನಿಗೂ ನಮ್ಮೂರ ಜೋಯಿಸರಿಗೂ ಚರ್ಚೆ ಆಗಿ, ವಂಶದ ದೊಡ್ಡವರ ಹೆಸರೇ ಹಾಕಬೇಕೆಂದು ಜೋಯಿಸರು ಪಂಕ್ತಿ ತೋರಿಸಿದರಂತೆ. ನಾನು ಸಾಮಾನು ತರೋದಕ್ಕೆ ಬೆಂಗಳೂರಿಗೆ ಹೋಗಿದ್ದಾಗ ಅವನು ನನ್ನ ಹೆಸರಿನಲ್ಲೇ ಲಗ್ನಪತ್ರಿಕೆ ಪ್ರಿಂಟು ಮಾಡಿಸಿಬಿಟ್ಟ ನೋಡಿ! 'ನಾನು ಸಾಕಿದ ಮಗು, ಕೇಶು; ನನ್ನ ಹಣ ಎಲ್ಲಾ ಅವರಿಗೆ ಬೇಕು. ನನ್ನ ಒಬ್ಬಳೇ ಮಗಳ ಮಕ್ಕಳಲ್ಲವೇ ಅವು. ನನ್ನ ಕಂಡರೆ ಲಕ್ಷ್ಯವಿಲ್ಲದೆ ಹೋದರೆ ನಾನ್ಯಾಕೆ ಹೋಗಬೇಕು ? ' ಎಂದು ಅವರು, ಕರೆಯಲು ಹೋಗಿದ್ದ ನಮ್ಮಾಕೆಯ ಮೇಲೆ ರೇಗಿ ಬಿದ್ದರಂತೆ ! ಆ ದೂರ್ವಾಸರನ್ನು ಶಾಂತ ಮಾಡೋದಕ್ಕೆ

ಅವರ ಮುದ್ದಿನ ಸಾಕು-ಮಗನೇ ಹೋಗಿದ್ದಾನೆ. ಕಾಲೇಜಿನಲ್ಲಿ ಓದೋ ಹುಡುಗ ಅವನೇ ಸರಿ ಅವರಿಗೆ ಗಿಲೀಟು ಮಾಡೋದಕ್ಕೆ.'

'ಅವರು ಏನು ಹೇಳುತ್ತಾರೋ!'

'ಹೇಳೋದೇನು, ಕೇಶೂನೇ ಹೇಳಿದ 'ಅಪ್ಪ, ಅಜ್ಜ ಅಜ್ಜೀನೆ ಮಣೆಯ ಮೇಲೆ ಕುಳಿತುಕೊಂಡು ಧಾರೆ ತೆಗೆದುಕೊಳ್ಳಲಿ' ಎಂದು. ಆಕೆಗೂ ನೋಡಿ, ಎರಡು ತಿಂಗಳ ಹಿಂದೆ ಬಂದ ನ್ಯೂಮೋನಿಯಾದಿಂದ ಇನ್ನೂ ಆಕೆ ಚೇತರಿಸಿಕೊಂಡಿಲ್ಲ. ಸ್ವಲ್ಪ ಕಷ್ಟಪಟ್ಟರೆ ಸುಸ್ತಾಗಿ ಹೋಗ್ತಾಳೆ.'

'ಅವರಾಗೋ ವೇಳೆಗೆ ಅಷ್ಟಾದರೂ ಕೆಲಸ ಮಾಡಿಕೊತಾ ಇದ್ದಾರೆ' ಎಂದು ಬೀಗಿತಿಯನ್ನು ರಾಮಾಚಾರ್ಯರು ಶ್ಲಾಘಿಸಿ ಮಾತನಾಡಿದರು.

ಆ ವೇಳೆಗೆ ಎರಡು ಜಗುಲಿಗಳ ನಡುವೆ ಇದ್ದ ಮನೆಯೊಳಕ್ಕೆ ಹೋಗುವ ಬಾಗಿಲ ಮುಂದೆ ಇದ್ದ ಮೆಟ್ಟಲುಗಳ ಬಳಿ ಈರಮ್ಮ ಬಂದಳು. ಅವಳನ್ನು ಕಂಡ ರಾಮಾಚಾರ್ಯರು 'ಊಟ ಮಾಡು ನಡಿ, ಈರಮ್ಮ' ಎಂದು ಮನೆಯೊಳಕ್ಕೆ ಹೋದರು. ಈರಮ್ಮನೂ ಮನೆಯೊಳಕ್ಕೆ ಕಾಲಿಟ್ಟು, ಹತ್ತು ರೂಪಾಯಿಗಳ ಹತ್ತು ನೋಟುಗಳನ್ನು ರಾಮಾಚಾರ್ಯರ ಕೈಯಲ್ಲಿ ಕೊಟ್ಟು, 'ಇದನ್ನು ಕೊಡಹೇಳಿ ಕಳಿಸಿದ್ರು, ಬುದ್ಧಿ' ಎಂದಳು. ರಾಮಾಚಾರ್ಯರು ಹಣವನ್ನು ಎಣಿಸಿ ನೋಡಿ, ಮುಖದಲ್ಲಿ ಮುಗುಳುನಗೆಯನ್ನು ಸೂಸಿ, 'ಸಾಕು ಬಿಡಮ್ಮ! ಹೊತ್ತಿಗೆ ಸರಿಯಾಗಿ ಇಷ್ಟು ಬಂದುದೂ ನನ್ನ ಪುಣ್ಯ!' ಎಂದು ಹೇಳಿ, 'ಊಟ ಮಾಡೇಳು ಈರಮ್ಮ' ಎಂದರು.

'ಊಟ ಮಾಡಿಕೊಂಡೇ ಬಂದೆ, ಬುದ್ಧಿ; ಅದಕ್ಕೇ ಹೊತ್ತಾಯ್ತು. ಇಲ್ದೇ ಇದ್ರೆ ಹತ್ತುಗಂಟೆಗೇ ಬಂದು ಬಿಡ್ತಿದ್ದೆ. ಮಕ್ಕಳಿಗೆ ಒಂದಷ್ಟು ಮಾಡಿ ಹಾಕಿ ಬಂದೆ ಬುದ್ಧಿ.'

'ಸ್ವಲ್ಪ ಹೊತ್ತಾದ್ದರಿಂದ ಏನೂ ಮಿಂಚಿ ಹೋಗಲಿಲ್ಲ, ಈರಮ್ಮ'

'ನಾ ಬರ್ತೀನೆ, ಬುದ್ಧಿ. ನಾಳೆ ಅವರೊಡನೆ ಸಂಜೆಗೆ ಮದ್ವೆ ವೇಳೆಗೆ ಬರ್ತೀನೆ.'

'ಒಳಗೆ ನೋಡಿಕೊಂಡು ಹೋಗು.

'ನಮ್ಮ ಲಚ್ಮಿದೇವಮ್ಮನ್ನ ನೋಡ್ಕೆ ಹೋಗ್ತೀನಾ, ಬುದ್ಧಿ!' ಎಂದು ನಸುನಗುತ್ತಾ ಮನೆಯೊಳಕ್ಕೆ ನುಗ್ಗಿದಳು.

---

೬

'ಹನುಮಪ್ಪ! ಓ ಹನುಮಪ್ಪ!'

'ಯಾರು, ತೋಟಿ ಮುನಿಗ್ನ?' ಎನ್ನುತ್ತಾ ಹನುಮ ಮನೆಯೊಳಗಿನಿಂದ ಮುಂಬಾಗಿಲಿಗೆ ಬಂದನು.

'ಹೌದು ಹನುಮಪ್ಪ.'

'ಏನ್ಸಮಾಚಾರ?'

'ಶ್ಯಾನುಭೋಗರ ಅಳಿಯ ಬಂದ ಗಾಡಿ, ಚಕ್ರದ ಪಟ್ಟಿ ಅಡ್ರೋಡಾಗ ಕಿತ್ತು ಬಿದ್ಬಿಟ್ಟಿದೆಯಪ್ಪಾ. ಅವರ ಅಜ್ಜ ಅಜ್ಜೀಗೆ ಬೆಳಗ್ನಿಂದಲೂ ಊಟ ಇಲ್ಲ.'

'ಈ ಸಂಜೆಲಲ್ವಾ ಲಗ್ನ?'

'ಹೌದಪ್ಪಾ! ನಿನ್ನೆ ಬರಲಿಲ್ಲಾಂತ, ನಿನ್ನೆಯಿಂದ್ಲೂ ಶ್ಯಾನುಭೋಗರು ಅಡ್ರೋಡ ಹತ್ರ ಕಾದಿರಹೇಳಿದ್ರು. ದೇವ್ರ ದಯ, ಆ ಲಚ್ಮಿದೇವಮ್ಮನ ಅದೃಷ್ಟ, ನಮ್ಮೂರ ಹತ್ತಿರ ಬಂದಾಗ್ಲೆ ಹಿಂಗಾದ್ದು. ಇನ್ನೆಲ್ಲಾದ್ರೂ ರಸ್ತೇಲಾಗಿದ್ರೆ ಏನು ಈ ದಿನದ ಲಗ್ನದ ಗತಿ!'

'ಲೇ, ಈರಿ, ಮುನಿಗನ್ನ ಕೇಳ್ದೇನೆ!'

'ಕೇಳ್ದೆ. ಬೇಗ ಗಾಡಿ ಕಟ್ಕೊಂಡು ನಡೀ. ಮದ್ವೆ ಗಂಡಿನ ಜತೇಲೆ ನಾವೂ ಬೇಗ್ಬೇಗ್ನೆ ಹೋಗೋಣ' ಎಂದು ಈರಮ್ಮ ಹನುಮನಿಗೆ ಹೇಳಿದಳು.

'ಮುನಿಯ, ಗಾಡಿ ತರ್ತೀನೆ. ನೀ ಮೊದಲು ಹೋಗಿ ಅವರ ಹತ್ರಿದ್ದು ಹೇಳು.'

'ಆಗ್಩ಿ ನಮ್ಮಪ್ಪ!' ಎಂದು ಹೇಳಿ ತೋಟಿ ಮುನಿಯ ಅಡ್ಡರಸ್ತೆಯ ಕಡೆ ಬೇಗ ಬೇಗ ಹೊರಟುಹೋದನು.

ಹನುಮ ಶ್ಯಾನುಭೋಗ ರಾಮಾಚಾರ್ಯರ ಮನೆಯ ಮದುವೆ ಗೆಂದು ತಂಗೇಡಿ ಸೊಪ್ಪಿನಲ್ಲಿ ಮಾಗಿ ಹಾಕಿದ್ದ ನಾಲ್ಕು ರಸಬಾಳೆ ಗೊನೆ ಗಳನ್ನು ತೆಗೆದುಕೊಂಡು, ಗಾಡಿಗೆ ಕಂಬಳಿ ಹಾಸಿ, ಬಾಳೆ-ಗೊನೆಗಳನ್ನು ಅದರ ಮೇಲಿಟ್ಟು, ಒಂದು ಚೆಂಬಿನಲ್ಲಿ ಮನೆಯಲ್ಲಿ ಕರೆದಿದ್ದ ಹಾಲನ್ನು ತೆಗೆದುಕೊಂಡು, ಅದಕ್ಕೆ ಒಂದು ಲೋಟವನ್ನು ಮುಚ್ಚಿ, 'ಲೇ, ಈರಿ, ಹೊತ್ತಾಯ್ತು.' ಎಂದು ಹೆಂಡತಿಯನ್ನು ಅವಸರಿಸಿದನು.

ಈರಮ್ಮ ತನಗೆ ಮದುವೆಯಲ್ಲಿ ಕೊಟ್ಟಿದ್ದ ಅರಳೇಪೇಟೆ ಸೀರೆ ಕುಪ್ಪಸ ಗಳಿಂದ ಅಲಂಕೃತಳಾಗಿ, ತಲೆಯಲ್ಲಿ ಹೂ ಮುಡಿದು, ಗಾಡಿಯ ಬಳಿಗೆ ಬಂದಳು. ಹನುಮ ಗಾಡಿಗೆ ಎತ್ತುಗಳನ್ನು ಕಟ್ಟಿ, 'ಕೂಡ್ಲೆ ದೇವಿ!' ಎಂದು ತನ್ನಿನಿಯಳನ್ನು ನೋಡುತ್ತಾ, ಮದುವೆಯ ದಿನವನ್ನು ನೆನೆದು ಮುಖದಲ್ಲಿ ಮುಗುಳುನಗೆ ಸೂಸಿ ಹೇಳಿದ. ಆಕೆ ಗಾಡಿಯ ಮುಂಭಾಗ ದಲ್ಲಿ ಕುಳಿತು ಹಾಲಿದ್ದ ಚೆಂಬನ್ನು ಗಂಡನ ಕೈಯಿಂದ ತೆಗೆದುಕೊಂಡು ಹಿಡಿದುಕೊಂಡಳು. ಹನುಮ ಹೆಂಡತಿಯ ಪಕ್ಕದಲ್ಲಿ ಕುಳಿತು, ಎತ್ತು ಗಳಿಗೆ ಕಟ್ಟಿದ್ದ ಹಗ್ಗಗಳನ್ನು ಕೈಯಲ್ಲಿ ಹಿಡಿದು, ಅವುಗಳ ಮೈಮೇಲೆ ಕೈ ಯಲ್ಲಾಡಿಸಿದ. ಅವು ಗಾಡಿಗೆ ಕಟ್ಟಿದ ಕುದುರೆಗಳಂತೆ ನಾಗಾಲೋಟದಿಂದ ಅಡ್ಡರಸ್ತೆಯ ಕಡೆ ಓಡಿದುವು.

ಹನುಮನ ಗಾಡಿಯು ಅಡ್ಡರಸ್ತೆಯ ಬಳಿ ಬಂದು, ಚಕ್ರದ ಗಾಲಿಯು ಕೆಳಗೆ ಬಿದ್ದು, ಚಕ್ರದ ಕಟ್ಟುಗಳೆಲ್ಲ ಬಿಚ್ಚಿಹೋಗಿ, ಭೂಮಿಗೆ ತಗುಲಿದ್ದ ಅಚ್ಚಿನ ಆಧಾರದಿಂದ ನಿಂತಿದ್ದ ಗಾಡಿಯ ಬಳಿ ನಿಂತಿತು. ಆ ಗಾಡಿಯ ಎತ್ತುಗಳು ಪಕ್ಕದಲ್ಲಿದ್ದ ಮರಕ್ಕೆ ಕಟ್ಟಿಹಾಕಲ್ಪಟ್ಟಿದ್ದುವು. ಅವುಗಳ ಬಳಿ ಗಾಡಿ ಹೊಡೆಯುವವನು ಯೋಚಿಸುತ್ತ ನಿಂತಿದ್ದನು. ಮದುಮಗ ಕೇಶವ ಮೂರ್ತಿ, ಅವನ ಅಜ್ಜ ಅಜ್ಜಿ ರಸ್ತೆಯ ಮರದ ಕೆಳಗೆ ನಿಂತಿದ್ದರು. ಕೇಶವ ಮೂರ್ತಿ ಪ್ರತಿಕ್ಷಣಕ್ಕೂ ತನ್ನ ಕೈಗಡಿಯಾರವನ್ನು ನೋಡಿಕೊಳ್ಳುತ್ತಾ ತಲೆಯ ಕ್ರಾಪನ್ನು ಸವರಿಕೊಳ್ಳುತ್ತಾ, ಕೋಟಿನ ಕಾಲರು, ಟೈಗಳನ್ನು ಮುಟ್ಟಿ ನೋಡಿಕೊಳ್ಳುತ್ತಾ, ಷರಾಯಿಯ ಮಡಿಪುಗಳನ್ನು ಸರಿಪಡಿಸಿ ಕೊಂಡು ಬೂಟ್ಸುಗಳ ಮೇಲಿದ್ದ ಧೂಳನ್ನು ನೋಡುತ್ತಿದ್ದನು.

ಗಾಡಿಯಿಂದ ಇಳಿದ ಈರಮ್ಮ, 'ಬನ್ನಿ ಅಜ್ಜಿ, ಗಾಡ್ಯಾಗೆ ಕೂತು

ಕೊಳ್ಳಿ' ಎಂದು ಹೇಳಿ, 'ಇವ್ರೇನಾ ಲಕ್ಷ್ಮೀದೇವಮ್ಮನ್ನ ಲಗ್ನಾಗೋರು ?' ಎಂದು ಕೇಶವಮೂರ್ತಿಯ ಕಡೆ ನೋಡಿ ಕೇಳಿದಳು.

'ಹೌದಮ್ಮ' ಎಂದು ಮುದುಕಿಯು ಹೇಳಿದಳು.

'ಆ ಲಚ್ಮಿದೇವೀಗೆ ತಕ್ಕಂತೆಯೇ ಇದ್ದಾರೆ ಈ ಅಪ್ಪ !' ಎಂದು ನಸುನಗುತ್ತಾ ಹನುಮನಿಗೆ ಹೇಳಿದಳು. ಹೆಂಡತಿಯ ಮಾತನ್ನು ಕೇಳಿ ಹನುಮ ನಸು ನಕ್ಕ. ಕೇಶವಮೂರ್ತಿ ತನ್ನ ಕೈಗಡಿಯಾರದ ಕಡೆ ನೋಡಿ, 'ಈಗಲೇ ಎರಡು ಗಂಟೆಯಾಯ್ತು. ಇನ್ನೊಂದು ಗಂಟೆಯೊಳಗಾಗಿ ಕೋಡಿಯೂರಿಗೆ ಹೋಗ್ತೇವೇನಪ್ಪ ?' ಎಂದು ಹನುಮನನ್ನು ಕೇಳಿದನು.

'ಇಲ್ಲಿಂದ ನಮ್ಮೂರು ಎರಡು ಮೈಲಿ. ಅಲ್ಲಿಂದ ಕೋಡಿಯೂರು ಮೂರು ಮೈಲಿ. ಇಷ್ಟು ದೂರಾನೂ ಅರ್ಧಗಂಟೇಲಿ ಹೋಗ್ಬಿಡೋಣ, ಬುದ್ಧಿ' ಎಂದು ಹನುಮ ಹೇಳಿದ.

'ಏನಯ್ಯಾ, ನಿನ್ನ ಎತ್ತುಗಳು ಗಂಟೆಗೆ ಹತ್ತು ಮೈಲಿ ಕುದುರೆ-ಗಾಡಿಯಂತೆ ಹೊಗ್ತವಾ ?' ಎಂದು ಎತ್ತುಗಳ ಕಡೆ ನೋಡುತ್ತಾ ಕೇಶವಮೂರ್ತಿ ಕೇಳಿದ.

'ನೋಡಿ ಬುದ್ಧಿ. ಸರ್ಕಾರ ಮೆಚ್ಚಿರೋ ಎತ್ತುಗಳು. ಬೇಗ ಗಾಡೀಲಿ ಕೂತ್ಕೊಳ್ಳಿ' ಎಂದು ಹೇಳಿ, ಬಿದ್ದಿದ್ದ ಗಾಡಿಯಲ್ಲಿದ್ದ ಸಾಮಾನುಗಳನ್ನೆಲ್ಲಾ ತನ್ನ ಗಾಡಿಯಲ್ಲಿ ಹಾಕಲು ಪ್ರಾರಂಭಿಸಿದನು. ಆಗ ಈರಮ್ಮ ಒಂದು ಗೊನೆ ಬಾಳೆಹಣ್ಣನ್ನು ಅವರ ಮುಂದಿಟ್ಟು, 'ತೆಗೆದುಕೊಳ್ಳಿ ಅಜ್ಜಿ. ತೆಗೆದುಕೊಳ್ಳಿ ತಾತ' ಎಂದು ಹಾಲಿನ ಚೆಂಬು-ಲೋಟಗಳನ್ನೂ ಮುಂದಿಟ್ಟಳು. ಅವರೆಲ್ಲಾ ಆ ಗೊನೆಯನ್ನು ಮುಗಿಸಿ, ಹಾಲು ಕುಡಿದರು. 'ಇನ್ನು ಎಷ್ಟುಹೊತ್ತಾದ್ರೂ ಪರವಾ ಇಲ್ಲ' ಎಂದು ಮುದುಕ ಹೇಳಿದ. ಈ ಮಾತು ಒಮ್ಮೆ ನೋಡಿ ಮೋಹಿಸಿದ ತನ್ನ ಭಾವೀ ಇನಿಯಳನ್ನು ನೋಡುವ ಉತ್ಸುಕತೆಯಿಂದಿದ್ದ ಕೇಶವಮೂರ್ತಿಗೆ ರುಚಿಸಲಿಲ್ಲ.

ಎಲ್ಲರೂ ಗಾಡಿಯಲ್ಲಿ ಕುಳಿತರು. ಹನುಮ ತೋಟಿ ಮುನಿಯನಿಗೆ ಬಿದ್ದಿರುವ ಗಾಡಿಯನ್ನು ಜನದ ಸಹಾಯದಿಂದ ಸಾಗಿಸಿ ಸರಿಪಡಿಸ ಹೇಳಿ, ತಾನೂ ಮುಂಕಣಿಯ ಮೇಲೆ, ತನ್ನ ಹೆಂಡತಿಯ ಪಕ್ಕದಲ್ಲಿ ಕುಳಿತು ಎತ್ತುಗಳ ಬೆನ್ನಿನ ಮೇಲೆ ಕೈಯನ್ನಲ್ಲಾಡಿಸಿದನು. ಅವು ನಾಗಾಲೋಟದಿಂದ ಓಡಲು ಪ್ರಾರಂಭಿಸಿದುವು.

—

ಎತ್ತಿನ ಗಾಡಿಯು ಮದುವೆಯ ಮನೆಯ ಮುಂದೆ ನಿಂತಿತು. ರಾಮಾಚಾರ್ಯರೂ ತಿರುಮಲೈಯ್ಯಂಗಾರ್ರ್ಯರೂ ಜಗುಲಿಯಿಂದಿಳಿದು ಗಾಡಿಯ ಬಳಿಗೆ ಬಂದು, ಗಾಡಿಯಿಂದಿಳಿದ ಮದುಮಗನನ್ನೂ, ವೃದ್ಧದಂಪತಿಗಳನ್ನೂ ಸ್ವಾಗತಿಸಿದರು. ಜಗುಲಿಯ ಬಳಿಯಿದ್ದ ಕೊಟಡಿಯ ಕಿಟಕಿಯಿಂದ ಮದುಮಗಳು ಲಕ್ಷ್ಮೀದೇವಿ, ಕೇಶವಮೂರ್ತಿಯನ್ನು ಉತ್ಸುಕತೆಯಿದ್ದ ಕಣ್ಣಿನಿಂದ ನೋಡಿ, ಮುಖದಲ್ಲಿ ಮುಗುಳುನಗೆಯನ್ನು ಸೂಸಿದಳು. ಗಾಡಿಯಿಂದಿಳಿದೊಡನೆಯೇ ಕಳ್ಳ ಕಟಾಕ್ಷವನ್ನು ಕಿಟಕಿಯ ಕಡೆ ಬೀರಿದ ಕೇಶವಮೂರ್ತಿ ಮುಗುಳುನಗೆಯಿಂದಲೇ ಪ್ರೇಯಸಿಗೆ ಪ್ರತ್ಯುತ್ತರವಿತ್ತನು.

ತಿರುಮಲೈಯ್ಯಂಗಾರ್ರ್ಯರು ಅವರ ಅತ್ತೆ-ಮಾವಂದಿರಿಗೆ 'ಬಹಳ ಹೊತ್ತಾಯ್ತು' ಎಂದರು

ಮುದುಕರು ಅವರ ಸ್ವಭಾವಕ್ಕನುಗುಣವಾಗಿಯೇ, 'ಏನು ಮಾಡುವುದು ಗಾಡಿ ಮುರಿದು ಹೋದರೆ? ಈ ಮಹಾರಾಯನ ಗಾಡಿ ಸಿಕ್ಕದೆ ಹೋಗಿದ್ದರೆ ನಾವು ಬಂದೂ ಬರದ ಹಾಗೆಯೇ ಆಗುತ್ತಿತ್ತು. ಅರ್ಧಗಂಟೆಯಲ್ಲಿ ಐದುಮೈಲಿ ಬಂದಿದ್ದೇವೆ! ಏನು ಚೆನ್ನಾಗಿವೆ ಎತ್ತುಗಳು!' ಎಂದರು.

ಆ ವೇಳೆಗೆ ಹನುಮ ಗಾಡಿಯಿಂದ ಎತ್ತುಗಳನ್ನು ಬಿಚ್ಚಿದ್ದ. ಯೋಚನೆಯಲ್ಲಿದ್ದ ರಾಮಾಚಾರ್ಯರ ಕಣ್ಣಿಗೆ ಹನುಮನೂ ಅವನ ಎತ್ತುಗಳೂ ಬಿದ್ದುವು. 'ನಿನ್ನ ಎತ್ತುಗಳು!' ಎಂದರು.

'ಹೌದು ಬುದ್ಧಿ' ಎಂದು ನಗುತ್ತಾ ಹನುಮ ಹೇಳಿದನು.

'ಹಣ?'

'ಸರಕಾರ ಕೊಟ್ಟ ಬಹುಮಾನ, ಬುದ್ಧಿ.'

'ಅಂ!' ಎಂದು ರಾಮಾಚಾರ್ಯರು ಹೇಳಿ, ತಿರುಮಲೈಯ್ಯಂಗಾರ್ರ್ಯರ ಕಡೆ ನೋಡುತ್ತಾ 'ಹಿತ್ತಲ ಮನೆಯಲ್ಲಿ ಎತ್ತುಗಳನ್ನು ಕಟ್ಟಿ ಹಾಕಿ ಬಾ, ಹನುಮ. ಸ್ವಾಮಿಯವರು ನಿನ್ನ ಬಹುಮಾನದ ವಿಚಾರ ಕೇಳಬೇಕಂತೆ' ಎಂದರು.

'ಆಗಲಿ, ಬುದ್ಧಿ' ಎಂದು ಹೇಳಿ, ಹನುಮ ಎತ್ತುಗಳೊಡನೆ ಹೋದನು. ಈರಮ್ಮ ಮದುಮಗಳನ್ನು ಮಾತನಾಡಿಸಲು ಹೋದಳು.

'ಹೆಣ್ಣಿನ ಮನೆಯಲ್ಲಿ ನಾಂದಿ ಎಲ್ಲಾ ಮುಗಿದಿದೆ. ನೀವೂ ಅತ್ತೆಯವರು ಇಬ್ಬರೂ ಸ್ನಾನ ಮುಗಿಸಿ ನಾಂದಿಗೆ ಕುಳಿತುಕೊಳ್ಳಬೇಕು. ಕೇಶವೂ, ಬೇಗ ಏಳಪ್ಪ. ಆಗಲೇ ಮೂರು ಗಂಟೆಯಾಗುತ್ತ ಬಂತು. ನಾಲ್ಕು ಗಂಟೆಗಾದರೂ ನಾಂದಿಗೆ ಕುಳಿತುಕೊಂಡರೆ ತಾನೇ ಏಳುಗಂಟೆ ಲಗ್ನಕ್ಕೆ ಸರಿಹೋಗೋದು ?' ಎಂದು ತಿರುಮಲೈಯ್ಯಂಗಾರ್ಯರು ಹೇಳಿದರು.

ರಾಮಾಚಾರ್ಯರು ಗಾಡಿಯಿಂದಿಳಿದ ಭಾವೀ ಅಳಿಯನನ್ನೂ ಬೀಗರನ್ನೂ, ಬೀಗರಿಳಿದಿದ್ದ ಮುಂದಿದ್ದ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬಂದು, ಅವರನ್ನೂ ಕೆಲಸಗಳನ್ನೂ ನೋಡಿಕೊಳ್ಳುವ ಹಾಗೆ ತಮ್ಮನಿಗೆ ಹೇಳಿ, ತಿರುಮಲೈಯ್ಯಂಗಾರ್ಯರೊಡನೆ ಪುನಃ ಜಗುಲಿಯ ಮೇಲಿನ ಚಾಪೆಯ ಮೇಲೆ ಕುಳಿತರು.

ಹನುಮ ಎತ್ತುಗಳನ್ನು ಹಿಂದಿನ ಮನೆಯಲ್ಲಿ ಕಟ್ಟಿ, ಅವುಗಳಿಗೆ ನೀರು ಇಟ್ಟು, ಹುಲ್ಲನ್ನು ಮುಂದೆ ಹಾಕಿ ಜಗುಲಿಯ ಬಳಿ ಬಂದನು. 'ಕುಳಿತುಕೋ, ಹನುಮ' ಎಂದು ರಾಮಾಚಾರ್ಯರು ಹೇಳಿದರು. ಹನುಮ ಚಾಪೆಯ ಕೊನೆಯಲ್ಲಿನ ನೆಲದ ಮೇಲೆ ಕುಳಿತನು. 'ಚಾಪೆಯ ಮೇಲೆ ಕುಳಿತುಕೋಪ್ಪ' ಎಂದು ತಿರುಮಲೈಯ್ಯಂಗಾರ್ಯರು ಹೇಳಿದರು. ಜಗುಲಿಯ ಕಡೆಗಿದ್ದ ಕಿಟಕಿಯ ಎಡಬಾಗಿಲನ್ನು ಮುಚ್ಚಿ, ಲಕ್ಷ್ಮೀದೇವಿ ಇವರನ್ನೆಲ್ಲಾ ಮರೆಯಲ್ಲಿ ನಿಂತು ನೋಡುತ್ತಾ, ಇವರಾಡಿಕೊಳ್ಳುವ ಮಾತುಗಳನ್ನು ಆಲಿಸುತ್ತಿದ್ದಳು.

'ದುಡ್ಡಿಗೇನು ಮಾಡಿದೆ? ಎತ್ತುಗಳನ್ನು ನೀನು ಮಾರದಿದ್ದುದು ಸಂತೋಷವಾಯ್ತು, ಹನುಮ' ಎಂದು ರಾಮಾಚಾರ್ಯರು ಹೇಳಿದರು.

'ಮಾರೋಣ ಅಂತ್ಲೇ ನಾನೂ ಈರಿ ಬುಧವಾರ ಎತ್ಗಳ್ನ ತೆಕ್ಕೊಂಡು ಜಾತ್ರೇಗೆ ಹೊರಟೆವು. ನಾಲ್ಗಂಟೆ ವೇಳ್ಗೆ ಜಾತ್ರೆ ಜೋರಾಗಿ ಸೇರಿತ್ತು. ಯಾರಾರೋ ಬಂದು ಎತ್ಗಳ್ನ ನೂರಕ್ಕೆ, ನೂರೆಪ್ಪತ್ತಕ್ಕೆ, ನೂರೆಂಭತ್ತಕ್ಕೆ ಕೇಳ್ದ್ರು. ಸಂಜೆಯಾಯ್ತು. ಸೂರ್ಯ ಮುಳಿಗ್ದ, ಬುದ್ಧಿ. ಜರದ ರುಮಾಲು ಹಾಕ್ಕೊಂಡು, ಬಿಳ್ಳೇ ಕೋಟಾಕ್ಕೊಂಡು, ಜರದ ಪಂಚೆ ಉಟ್ಟು, ಕಾಲಿಗೆ ಚಡಾವು ಮೆಟ್ಟಿದ್ದ ಇಬ್ಬರು ಬಂದು, ಎತ್ಗಳ್ನ ನೋಡಿ, 'ಏನಯ್ಯಾ,

ಇನ್ನೂರಕ್ಕೆ ಕೊಡ್ತೀಯಾ?' ಎಂದು ಕೇಳಿದ್ರು. ಇನ್ನೂರೈವತ್ತಕ್ಕೆ ಕಮ್ಮಿ ಕೊಡ್ಲು ಮನಸ್ಸಿರಲಿಲ್ಲ, ಬುದ್ಧಿ.'

'ಆಮೇಲೆ?' ಎಂದು ತಿರುಮಲೈಯ್ಯಂಗಾರ್ರು ಕೇಳಿದರು

'ಏನ್ಮಾಡೋದು. ನಾನು ಶ್ಯಾನುಭೋಗರ್ಗೆ ಕೊಡಬೇಕಾದ ಹಣಾನ ಗುರುವಾರ ಬೆಳಗ್ಗೆ ಒಳ್ಗೆ ಕೊಡ್ಲೇಬೇಕಾಗಿತ್ತು. ಆಗ್ಲಿ ಎಂದು ಒಪ್ಕೊಂಡೆ. ಎತ್ಗಳ್ನ ಅವರಿಗೆ ಕೊಟ್ಟೆ. ಅವರು ಹತ್ತು ಹತ್ರೂಪಾಯಿ ನೋಟ್ನ ಒಂದು ನೂರು ರೂಪಾಯಿ ನೋಟ್ನ ಕೊಟ್ರು. ಈರಿ ಅವ್ರಗಳ್ಮೇಲೆ ಹಾಕಿದ್ದ ಕಂಬ್ಳೀ ಕಡೇನೇ ನೋಡ್ತಿದ್ಲು. ಎತ್ತುಗಳೇ ಹೋದ್ಮೇಲೆ ಕಂಬ್ಳಿ ಯಾಕೆ ಬಿಡು ಎಂದೆ'

'ಸರಿ' ಎಂದು ರಾಮಾಚಾರ್ಯರು ತಲೆದೂಗಿದರು.

'ಮಕ್ಕಳ್ಗೆ ಪುರಿ ಕಾರಾ ಶೇವ್ರ ತಕ್ಕೊಂಡು ಬರೋಣ ಅಂತ ನಾನು ಈರಿ ಅಂಗಡೀಗೆ ಹೋಗೋಣ ಅಂತಿದ್ವೆವು. ಎತ್ಗಳ್ನ ಹಿಡ್ಕೊಂಡು ನಮ್ಕಡೆ ನೋಡಿ ನಗ್ತಾ ಅವರು ಹೊರಟೋದ್ರು, ಬುದ್ಧಿ. ಈರಿ ತನ್ನೆತ್ಗಳ್ನ ಕಣ್ಮರೆ ಯಾಗೋ ತನ್ಕ ನೋಡ್ತಾ ಕಂಬದಾಗೆ ನಿಂತುಬಿಟ್ಲು. ಅವು ಕಣ್ಮರೆಯಾದ ಮೇಲೆ ಕಣ್ಣೀರು ಸುರಿಸಿದ್ಲು. 'ಬಾ ಈರಿ! ಮಕ್ಕಳಿಗೇನಾದ್ರೂ ತೆಕ್ಕೊಂಡು ಹೋಗೋಣ. ಯಾಕಿಂಗಳ್ತಿ? ಲಚ್ಮಿದೇವಮ್ಮನ ಮುದ್ದೇ ನೋಡೋ ಸುಖ ನಮ್ಮೆತ್ಗಳ್ನ ಮನೆ ಬಿಟ್ಟು ಕಳ್ಸೋಕ್ಕಿಂತ ಹೆಚ್ಚಲ್ವೆ? ನೂರು ರೂಪಾಯ್ಗೆ ಜತೆ ಹೋರಿಗಳ್ನ ತೆಗ್ಯೋಣ. ಅವ್ರೂ ಎರಡ್ವರ್ಷದಾಗೆ ಇಂಗೇ ಎತ್ಗಳಾ ಗ್ತವೆ' ಎಂದೆ. ಈರಿ ಮಾತ್ನಾಡ್ದೆ ಜತೇಲಿ ಬಂದ್ಲು. ನೋಟುಗಳ್ನ ಪಂಚೆ ಕೊನ್ಯಾಗ ಕಟ್ಟಿ ನಡುವಿನಾಗ ಸಿಕ್ಕಿಸ್ದೆ. ಅಂಗ್ಡೀಗೆ ಹೋಗಿ ನಾನೂ ಈರಿ, ಪುರಿ, ಕಾರಾ ಶೇವ್ರೂ, ಎಲೆ ಅಡ್ಕೆ ಊರಿಂದ ತಂದ ಚಿಲ್ರೆಯಿಂದ ತೆಕ್ಕೊಂಡ್ವಿ. ಇನ್ನೂ ಅಡ್ಕೆ ಅಂಗ್ಡಿ ಹತ್ತಿರಿರೋವಾಗ್ಲೆ ಜನ ಪೋಲೀಸ್ ಟೇಸನ್ ಕಡೆ ಓಡ್ತಿತ್ತು. 'ಏನಪ್ಪ?' ಎಂದೊಬ್ಬನ್ನ ಕೇಳ್ದೆ'

'ಏನು ಸಮಾಚಾರ?' ಎಂದು ತಿರುಮಲೈಯ್ಯಂಗಾರ್ರು ಕೇಳಿದರು.

'ಇಬ್ಬರ್ನ ಎರಡೆತ್ತುಗಳು ತಿವಿದುಬಿಟ್ಟಿವೆಯಂತೆ! ಅವರ್ನ ಎತ್ಗಳ್ನ ಪೋಲೀಸ್‌ನೋರು ಟೇಸನ್‌ಗೆ ಕರ್ಕೊಂಡೋಗ್ತವ್ರೆ' ಎಂದು ಓಡೋ- ಗ್ತಿದ್ದ. 'ಅದೇನೋ ನೋಡೋಣ ಬಾ, ಈರಿ!' ಎಂದು ನಾನೂ ಈರಿ

ಟೇಸನ್ ಹತ್ರ ಹೋದ್ವು. ನೋಡ್ತೇವೆ ಸಮ್ಮೆತ್ತುಗಳು ! ಅವುಗಳ ಕೊಂಬು ಗಳಾಗ ರಕ್ತ ಹಂಗೇ ಇತ್ತು. ಇಬ್ಬರ ತೊಡೆಗಳ್ನೂ ಚೆನ್ನಾಗಿ ಇರಿದು ಬಿಟ್ಟಿವೆ. ಅವರಿಬ್ಬರನ್ನೂ ನೆಲದ ಮೇಗೆ ಮಲಗ್ಸಿದ್ರು. ನಮ್ಮನ್ನ ನೋಡಿ ದೊಡ್ನೆ · ಇವರ್ದೇ ಎತ್ತುಗಳು ! ' ಎಂದರು. ಪೋಲೀಸಿನಿಸ್ಪೆಕ್ಟ್ರು ಬಂದು ನನ್ನ ಹಿಡ್ಕೊಂಡು, ' ಏನಯ್ಯಾ, ಇಂಥಾ ಎತ್ತುಗಳನ್ನ ಯಾಕೆ ಕೊಟ್ಟೆ ಇವರಿಗೆ ? ' ಎಂದು ಜಬರ್ದಸ್ತು ಮಾಡಿದ್ರು ಬುದ್ಧಿ ! '

' ನೀನೇನು ಮಾಡಿದೆ ? ' ಎಂದು ರಾಮಾಚಾರ್ಯರು ಕೇಳಿದರು.

' ಏನೋ ಅವ್ರು ಮೋಸ ಮಾಡವ್ರೆ, ಬುದ್ಧಿ! ಅದ್ಕೇ ದೇವ್ರು ಶಿಕ್ಷೆ ಮಾಡವನೆ. ಮಗೂ ಕೈಗೆ ನನ್ನೆತ್ತುಗಳ್ನ ಕೊಡಿ, ಅವು ಸೀರ್ಕಡಿಸಿ ಕೊಂಡು ಬರ್ತವೆ. ಅದನ್ನೇನಾದ್ರೂ ಮಾಡಿದ್ರೆ ನನ್ನ ಗಲ್ಗಾಕಿ ! ' ಎಂದೆ ಇನ್‌ಸ್ಪೆಕ್ಟ್ರೇ ಎತ್ಗಳ್ನ ಹಿಡ್ಕೊಂಡ್ರು. ಅವು ಕುರಿಮರಿ ಹಂಗೆ ನಿಂತಿ ದ್ದುವು ಅವ್ರು ಒಂದು ಮಗೂನ ಕರ್ದು, ಎತ್ಗಳ ಹಗ್ಗಾನ ಅದರ ಕೈಗೆ ಕೊಟ್ಟು ' ಕರ್ಕೊಂಡೋಗು ' ಎಂದ್ರು. ಮಗು ಎಳ್ಕೊಂಡೋದ ಕಡೆ ಅವು ನಾಯಿಂಗೆ ಹೊದ್ವು, ಬುದ್ಧಿ ! ಇನ್‌ಸ್ಪೆಕ್ಟರಿಗೆ ಆಶ್ಚರ್ಯ ಆಯ್ತು. ' ಏನಯ್ಯಾ ! ' ಎಂದು ಬಿದ್ದಿದ್ದ ಆ ದೊಡ್ಡಮನುಷ್ಯರ್ನ ಕೇಳಿದ್ರು. ' ಎತ್ಗಳು ನಮಗೆ ಬೇಡ. ನಮ್ಮ ಹಣ ಕೊಟ್ಬಿಡ್ಲಿ ' ಅಂದ್ರು ಅವರು. ನಡುವಿನಿಂದ ನೋಟು ತೆಗೆದು ಕೊಟ್ರೆ, ಅವನು ಎಣಿಸ್ದೇನೆ ಜೇಬಿಗೆ ಹಾಕ್ಕೊಂಡ. ಇನ್‌ಸ್ಪೆಕ್ಟ್ರು ' ಇಲ್ಲಿ ಕೊಡು ಆ ನೋಟುಗಳ್ನ ' ಎಂದ್ರು. ಅವ ಕಕ್ಕಾಬಿಕ್ಕಿಯಾದ, ಬುದ್ಧಿ. ಅವ್ರೇ ಅವನ ಜೇಬಿಗೆ ಕೈಹಾಕಿ ನೋಟು ಗಳ್ನ ತೆಗೆದ್ಕೊಂಡು, ನನ್ಕಡೆ ನೋಡಿ ನಕ್ಕು ' ಘಾಟಿಗಳು ! ' ಎಂದ್ರು ಗಾಯದ್ನೋವಿನ ಜತೇಗೆ ಅವರಿಗೆ ಭಯ ತಟ್ಟಿತು. ' ಕ್ಷಮ್ಸಿ' ಎಂದು ಇನ್‌ಸ್ಪೆಕ್ಟರನ್ನ ಅವರು ಕೇಳ್ಕೊಂಡ್ರು. '

' ಏನಾಗಿತ್ತು ನೋಟುಗಳಿಗೆ ? ' ಎಂದು ರಾಮಾಚಾರ್ಯರು ಕೇಳಿ ದರು.

' ನೂರು ರೂಪಾಯಿನ್ದು ಫೋರ್ಜರಿ ನೋಟಂತೆ. ಇನ್‌ಸ್ಪೆಕ್ಟ್ರು ' ಕ್ಷಮ್ಸೋದೆ ! ಹಾಕ್ತೇನೆ ಜಯಲ್ನಲ್ಲಿ ನಿಮ್ಮನ್ನ. ಮೊದಲು ಆಸ್ಪತ್ರೇಲಿ ಬಿಟ್ಟು, ಆಮೇಲೆ ಸಜಾ ಮಾಡಿಸ್ತೇನೆ ' ಎಂದು ಹೇಳಿ ನನ್ಕಡೆ ನೋಡಿ

' ಸತ್ಯವಂತ ನೀನು. ತೆಗೆದುಕೊಂಡೋಗು ನಿನ್ನ ಎತ್ಗಳ್ನ ' ಎಂದು ಹೇಳಿದರು. ನಾನು ಸುಮ್ನೆ ಎತ್ಗಳ್ನ ನೋಡ್ತಾ ನಿಂತೆ. ಈರಿ ಹೋಗಿ ಎತ್ಗಳ್ನ ಹಿಡ್ಕೊಂಡ್ಳು. ' ನಮಸ್ಕಾರ ಬುದ್ಧಿ ' ಎಂದು ಇನ್‌ಸ್ಪೆಕ್ಟ್ರವರಿಗೆ ಹೇಳ್ದೆ. ಅವ್ರು ನಗ್ತಾ ಎತ್ಗಳ್ನೇ ನೋಡ್ತಾ ' ನಿಮ್ಮ ಹೆಸರೇನು ? ' ಎಂದ್ರು. ' ನನ್ನ ಹೆಸ್ರು ಹನುಮ; ನನ್ನ ಹೆಂಡ್ತಿ ಹೆಸರು ಈರಿ ' ಎಂದೆ. ' ಎತ್ಗಳ್ನ ಚೆನ್ನಾಗಿಟ್ಕೊಂಡಿದ್ದೀರಪ್ಪಾ! ಈ ದಿನ ರಾತ್ರಿ ಒಂಭತ್ತುಗಂಟೆಗೆ ರೆವಿನ್ಯೂ ಕಮೀಷನರು ಒಳ್ಳೆ ಎತ್ತಿಗೆ ಬಹುಮಾನ ಕೊಡ್ತಾರೆ. ಇವನ್ನ ಕೆರೆ ಹತ್ತಿರಿರೋ ದೊಡ್ಡ ಚಪ್ಪರದ ಹತ್ತಿರ ತೆಗೆದುಕೊಂಡು ಹೋಗು. ಎತ್ಗಳು ಬಲು ಚೆನ್ನಾಗಿವೆ. ನಿನ್ನ ಅದೃಷ್ಟಾನೂ ಚೆನ್ನಾಗಿರೋ ಹಾಗಿದೆ. ಬಹುಮಾನ ಬಂದ್ರೂ ಬರಬಹುದು ' ಎಂದ್ರು. ' ಆಗ್ಲಿ, ಬುದ್ಧಿ! ' ಎಂದು ಹೇಳಿ, ನಾನೂ ಈರಿ ಎತ್ಗಳ್ನ ಹಿಡಕೊಂಡು ಕೆರೆಗೋಗಿ, ಅವುಗಳ ಕೊಂಬುಗಳ್ನ ತೊಳೆದು ಚಪ್ಪರದ ಹತ್ರ ತೆಗೆದುಕೊಂಡು ಹೋದ್ವು. '

' ಆಮೇಲೆ ? ' ಎಂದು ತಿರುಮಲೈಯ್ಯಂಗಾರ‍್ಯರು ಕೇಳಿದರು.

' ದೊಡ್ಡ ದೊಡ್ಡ ಮನಸ್ರೆಲ್ಲಾ ಬಂದು ಸಾಲಾಗಿ ನಿಂತಿದ್ದ ಎತ್ಗಳ್ನೆಲ್ಲ ನೋಡ್ತಾ ಹೋದ್ರು, ಬುದ್ಧಿ. ನಮ್ಮ ಡೆಪ್ಟೀ ಕಮೀಷನರ್ರೂ ಇದ್ದ್ಯಾರೋ ಬೆಂಗ್ಳೂರಿಂದ ಬಂದ ರೆವಿನ್ಯೂ ಕಮೀಷನರ್ರೂ, ಅಮಲ್ದಾರ್ರೂ, ಪೋಲೀಸ್ ಇನ್‌ಸ್ಪೆಕ್ಟ್ರೂ ಇನ್ನೂ ಯಾರ್‍ಯಾರೋ ಇದ್ರು, ಬುದ್ಧಿ! ಬೆಂಗ್ಳೂರಿಂದ ಬಂದವರು ನನ್ನ ಎತ್ಗಳ ಹತ್ರ ನಿಂತು, ' ಇವುಗಳ ಕಣ್ಣುಗಳು ಎಷ್ಟು ಚೆನ್ನಾಗಿವೆ! ಎಷ್ಟು ಎತ್ತರವಿವೆ ನೋಡಿ. ಮೈ ಮಿಣುಗುತ್ತಿದೆ. ಬಿಳಿ ಎತ್ತುಗಳಿಗೆ ಸರಿಯಾಗಿ ಬಿಳಿ ಕಂಬಳಿ ಮೇಲೆ ಹಾಕಿದೆ. ಆ ಕಂಬಳಿಗೆ ಸರಿಯಾದ ಕೆಂಪು ಅಂಚು ಚೆನ್ನಾಗಿ ಒಪ್ಪುತ್ತೆ. ಇವೇ ಹಳ್ಳಿಯವರ ಭಾಗ್ಯ! ' ಎಂದು ಡೆಪ್ಟೀ ಕಮೀಷನರಿಗೆ ಹೇಳಿದರು. ' ಹೌದು ಸಾರ್ ' ಎಂದ್ರು ಅವರೂ. ' ನಿನ್ನ ಹೆಸರೇನು ? ' ಎಂದು ಅವರು ನನ್ನ ಕೇಳಿದ್ರು. ' ಹನುಮ, ಬುದ್ಧಿ ' ಎಂದೆ. ಅವರು ನಗ್ತಾ ' ನಿನ್ನ ಎತ್ತುಗಳಿಗೆ ಬಹುಮಾನ ಕೊಟ್ಟಿದೆ ' ಎಂದು ಹೊರಟೋದ್ರು. '

' ನೀನೇನು ಮಾಡಿದೆ ? ' ಎಂದು ರಾಮಾಚಾರ‍್ಯರು ಕೇಳಿದರು.

' ಚಪ್ಪರದ ಕೆಳಗೆ ಲೆಕ್ಚರ್ಗೆ ಎಲ್ಲಾ ಸಿದ್ಧ ಆಯ್ತು. ಆಗ ಅಮಲ್ದಾರ್ರು

ನನ್ನ ಹತ್ರ ಬಂದು, 'ಹನುಮ, ನಿನ್ನ ಎತ್ಗಳ್ಗೆ ಸರ್ಕಾರ ನೂರು ರೂಪಾಯಿ ಬಹುಮಾನ ಕೊಟ್ಟಿದೆ. ಇನ್ನು ಕೊಂಚ ಹೊತ್ಗೆ ನಿನ್ನ ಹೆಸರು ಕರೀತಾರೆ. ಆಗ ಹೋಗಿ ಅದನ್ನ ತೆಗೆದ್ಕೋ. ತೆಗೆದ್ಕೊಳ್ಳೋಕೆ ಹೋಗೋವಲ್ಲಿ ದೊಡ್ಡ ಸಾಹೇಬರಿಗೆ ನಮಸ್ಕಾರ ಮಾಡು. ತೆಗೆದುಕೊಂಡು ಬರೋವಲ್ಲೂ ನಮಸ್ಕಾರ ಮಾಡಿ ಹಿಂದ ಹಿಂದಕ್ಕೇ ಬಾ' ಎಂದ್ರು. 'ಆಗ್ಲಿ, ಬುದ್ಧಿ!' ಎಂದೆ. ಅವ್ರು ನನ್ನ ಕರ್ಕೊಂಡೋದ್ರು. ಎತ್ತರ್ದ ಮೇಜುಗಳ ಮೇಲ್ಹಾಕ್ದ ಕುರ್ಚಿಗಳ ಮೇಲೆ ಎಲ್ಲಾ ಸಾಹೇಬರುಗಳೂ ಕೂತಿದ್ರು. ಬಹುಮಾನ ಹಂಚೋ ಪಟ್ಟಿನಾ ತೆಗೆದ್ಕೊಂಡು ಡೆಪ್ಟೀ ಕಮೀಷನರು 'ಒಳ್ಳೇ ಎತ್ತುಗಳಿಗೆ ಮೊದಲ ಬಹುಮಾನ ರಮಾಪುರದ ಹನುಮಪ್ಪನಿಗೆ' ಎಂದ್ರು. ನಾನು ದೊಡ್ಡ ಸಾಹೇಬ್ರ ಹತ್ರ ಹೋಗಿ ನಮಸ್ಕಾರ ಮಾಡ್ದೆ. ಎಲ್ಲಾ ಚಪ್ಪಾಳೆ ಹೊಡದ್ರು. ದೊಡ್ಡ ಸಾಹೇಬ್ರು, ಒಂದು ಮುಕಮಲ್ಲು ಚೀಲಾನ ನನ್ನ ಕೈಗೆ ಕೊಟ್ಟು, 'ಹೀಗೆ ಎಲ್ರೂ ಚೆನ್ನಾಗಿ ಸಾಕಬೇಕು ಎತ್ತುಗಳ್ನ' ಎಂದ್ರು. ನಾನು ಆ ಚೀಲಾನ ತೆಗದ್ಕೊಂಡು ನಮಸ್ಕಾರ ಮಾಡಿ ಬಂದೆ.'

'ಹಾಗಾ!' ಎಂದು ರಾಮಾಚಾರ್ಯರು ಹೇಳಿದರು.

'ಆಮೇಲೆ ಏನು ಮಾಡಿದೆ?' ಎಂದು ತಿರುಮಲೈಯ್ಯಂಗಾರ್ಯರು ಹನುಮನನ್ನು ಕೇಳಿದರು.

'ಚಪ್ಪರದಲ್ಲಿರೋ ಪೋಲೀಸ್ ಇನ್‌ಸ್ಪೆಕ್ಟರಿಗೆ ನಮಸ್ಕಾರ ಮಾಡ್ದೆ. 'ಹನುಮ, ಈ ಎತ್ಗಳ್ನ ಮಾರಬೇಡ. ನಿನ್ನ ಮನೇಗೆ ಭಾಗ್ಯಾ ತಂದಿವೆ' ಎಂದ್ರು. 'ಇಲ್ಲಾ ಮಾರೋಲ್ಲ ಬುದ್ದಿ' ಎಂದೆ. 'ಅವರ್ಮೇಲೆ ಸರ್ಕಾರ ಮೋಸದ ಕಳ್ನೋಟ್ ತಯಾರ್ಮಾಡಿದ್ದಕ್ಕೆ ಕೇಸ್ ಮಾಡ್ತದೆ, ಅವರು ಇನ್ನೂ ಎಷ್ಟೋ ಜನಾನ ಹೀಗೆ ಮೋಸಾ ಮಾಡಿದ್ದಾರೆ. ಕರೆದಾಗ ಕೋರ್ಟಿಗೆ ಬಂದು ಸತ್ಯ ಹೇಳು ನೀನು ಕೋಲಾರಕ್ಕೆ ಬಂದ್ಹೋಗೋದಕ್ಕೆ ಸರ್ಕಾರ ಹಣ ಕೊಡುತ್ತೆ' ಎಂದರು. 'ಆಗಲಿ ಬುದ್ದಿ' ಎಂದು ಹೇಳಿ, ಚಪ್ಪರದಾಚೆ ಬಂದೆ. ಈರಿ ಎತ್ಗಳೊಡನೆ ನಿಂತಿದ್ಳು. ಇಬ್ರೂ ಹೋಟಲಾಗ ತಿಂಡಿ ತಿಂದು ಪರಷೆ ಕೊನೇಲ್ಲಿರೋ, ಕೆರೆ ಹತ್ತಿರದಲ್ಲಿರೋ ಆ ಆಲದ ಮರಕ್ಕೆ ಎತ್ಗಳ್ನ ಕಟ್ಹಾಕಿ, ಮರದ ಕೆಳ್ಗೆ ಕಂಬ್ಳಿ ಹೊದ್ಕೊಂಡು ಮಲ

ಕೊಂಡ್ರು. ಬೆಳಗ್ಗೆ ಈರಿ ಕೈಗೆ ಆ ನೂರು ರೂಪಾಯಿ ಕೊಟ್ರು 'ಬೇಗ ಶ್ಯಾನುಭೋಗರಿಗೆ ಕೊಡು. ನಾ ಮಕ್ಕಳ್ಗೆ ಬಟ್ಟೆ ಬರೆ ತಕ್ಕೊಂಡು ಸಂಜೆಗೆ ಬರ್ತೀನಿ ' ಎಂದು ಎತ್ತಗಳ್ನೂ ಅವಳೊಡನೇ ಕಳಿಸಿಕೊಟ್ರೆ.'

'ಈರಮ್ಮ ಹಣ ತಂದುಕೊಟ್ಟೋಳು ಏನು ಹೇಳಲಿಲ್ಲ ! ' ಎಂದು ರಾಮಾಚಾರ್ಯರು ಆಶ್ಚರ್ಯವನ್ನು ಸೂಚಿಸಿದರು.

'ನಾನೇ ಹೇಳ್ಲಿ ಅಂತ ಸುಮ್ಗಾದ್ಳೋ ಏನೋ ! ' ಎಂದು ಹನುಮ ಹೇಳಿದ.

'ನಮ್ಮವರಿಗೆ ಹೇಗೆ ನಿನ್ನ ಗಾಡಿ ಸಿಕ್ಕಿತು ? ' ಎಂದು, ತಿರುಮಲ ಅಯ್ಯಂಗಾರ್ರು ಹನುಮನನ್ನು ಕೇಳಿದರು.

'ಶುಕ್ರವಾರ ಬೆಳಗ್ಗೆ ಮನೆಗೆ ಬಂದೆ. ಮಧ್ಯಾಹ್ನ ಊಟ ಮಾಡಿ ಕುಳಿತಿದ್ರು. ಆಗ ತೋಟಿ ಮುನ್ಯ ಬಂದು, ಅವ್ರು ಬಂದ ಗಾಡಿ ಮುರಿದ್ಹೋಗಿದ್ದ ಸಮಾಚಾರಾನ ಹೇಳಿ, ಬೇಗ ಗಾಡಿ ಕಟ್ಟ ಹೇಳ್ದ. ಗಾಡಿ ಕಟ್ಟಿ ಕರ್ಕೊಂಡು ಬಂದೆ. ಲಚ್ಮಿದೇವಮ್ಮನ ಭಾಗ್ಯ, ಅವ್ರು ಹೊತ್ಗೆ ಸರಿಯಾಗಿ ಬಂದ್ರು. '

'ನಮ್ಮೆಲ್ಲರ ಮಾನಾನೂ ಉಳಿಸಿದೆ, ಹನುಮ ! ' ಎಂದು ತಿರುಮಲ ಅಯ್ಯಂಗಾರ್ರು ಹೇಳಿದರು.

'ನಮ್ಮ ಮನೇನ ಕಾಯ್ದುಕೊಳ್ಳುವ ದೇವರ ಹಾಗಿದ್ದಾನೆ ಎಲ್ಲಾ ಕೆಲಸಗಳಲ್ಲಿಯೂ, ಹನುಮ ! ' ಎಂದು ರಾಮಾಚಾರ್ಯರು ಹೇಳಿದರು.

'ಅಂಥಾ ದೊಡ್ಮಾತು ಬೇಡ, ಬುದ್ಧಿ! ನಿಮ್ಮ ಚಾಕ್ರಿ ತನ್ನ ಚಾಕ್ರೀನ ಸರಿಯಾಗಿ ಮಾಡಿದ್ನ ನೀವೂ ದೇವ್ರೂ ಮೆಚ್ಚಿದ್ರೆ ಸಾಕು. ' ಎಂದ ಹನುಮ.

ಈ ಮಾತುಗಳನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಲಕ್ಷ್ಮಿದೇವಮ್ಮ ತನ್ನ ಕಣ್ಣೊರಸಿಕೊಂಡಳು.

—

ಕಾಶಿಯಾತ್ರೆಯಾಯಿತು. ವಧೂವರರ ಹಾರ ಬದಲಾವಣೆಯಹಾಯಿತು. ಮದುವೆಯ ಸಾಂಗಗಳೆಲ್ಲಾ ಮುಗಿದುವು. ಗಂಡು-ಹೆಣ್ಣಿಗೆ ವಿವಾಹದ ಉಡುಗೊರೆಯನ್ನಿತ್ತಾಯಿತು. ಅವರು ಮಾಂಗಲ್ಯಧಾರಣೆಗೆ ಮೊದಲು ಅವನ್ನು ಧರಿಸಲು ಹೋದರು.

ಕೇಶವಮೂರ್ತಿ ಹರಿಸಿನದ ಪಂಚೆಯನ್ನುಟ್ಟು, ಮಧುಪರ್ಕದ ಪಂಚೆ ( ವಧುವಿನ ತಂದೆ ಮದುವೆಯಲ್ಲಿ ಕೊಡುವ ಬೆಲೆಬಾಳುವ ಪಂಚೆ ) ಯನ್ನು ಹೊದೆದು ಮಣೆಯ ಮೇಲೆ ಬಂದು ಕುಳಿತನು.

ಲಕ್ಷ್ಮಿದೇವಿ ತೂರೆಸೀರೆ ( ಗಂಡಿನ ಕಡೆಯವರು ಹೆಣ್ಣಿಗೆ ಕೊಡುವ ಬೆಲೆ ಬಾಳುವ ಸೀರೆ ) ಯನ್ನುಟ್ಟು, ಕೊಟ್ಟಿದ್ದ ಒಡವೆಗಳನ್ನೆಲ್ಲಾ ಧರಿಸಿ ಗಂಡನು ಹಾಕಿದ್ದ ಹಾರವು ಕತ್ತಿನಲ್ಲಿ ಶೋಭಿಸುತ್ತಿರಲು, ಕೈಯಲ್ಲಿ ಪಂಚ ವಾಳವನ್ನೂ ಎರಡು ಹೂವಿನ ಹಾರಗಳನ್ನೂ ತೆಗೆದುಕೊಂಡು ಮನೆಯ ಹಿತ್ತಲಿಗೆ ಹೋದಳು.

ಹನುಮನ ಎತ್ತುಗಳ ಮುಖ ಮತ್ತು ಕಾಲುಗಳಿಗೆ ಹರಿಸಿನ ಕುಂಕುಮವಿಟ್ಟು, ಅವುಗಳ ಕತ್ತಿಗೆ ಹೂವಿನ ಹಾರಗಳನ್ನು ಹಾಕಿ, ಅವುಗಳ ಕಾಲುಗಳನ್ನು ಹಿಡಿದುಕೊಂಡು ಮಂಡಿಯೂರಿ ನಮಸ್ಕಾರ ಮಾಡುತ್ತಾ ಅವುಗಳ ಕಾಲುಗಳ ಮೇಲೆ ಆನಂದಬಾಷ್ಪವನ್ನು ಸುರಿಸಿದಳು.

'ಇಟ್ಟಿರುವ ಗೋಧೂಳಿ ಲಗ್ನ ಬಂತು, ಹೊತ್ತಾಯ್ತು!' ಎಂಬ ಪುರೋಹಿತರ ಗಲಾಟೆಗೆ ಬೇಗ ಮಗಳನ್ನು ಕರೆತರಲು ರಾಮಾಚಾರ್ಯರೇ ಲಕ್ಷ್ಮಿದೇವಿಯ ಕೊಟಡಿಗೆ ಬಂದು ನೋಡಿದರು. ಆಕೆ ಹಿಂದಿನ ಮನೆಯ ಕಡೆ ಹೋದಳೆಂಬುದನ್ನು ತಿಳಿದು ಅವರು ಎತ್ತುಗಳನ್ನು ಕಟ್ಟಿಹಾಕುವ ಸ್ಥಳಕ್ಕೆ ಹೋದರು. ಅಲಂಕೃತವಾಗಿರುವ ನಂದಿಯಂತಿರುವ ಎತ್ತುಗಳ ಪಾದಪೂಜೆ ಮಾಡುತ್ತಿದ್ದ ಮಗಳನ್ನು ನೋಡಿ, 'ಅಮ್ಮಾ! ಲಕ್ಷ್ಮಿ!!' ಎಂದರು.

ಲಕ್ಷ್ಮಿದೇವಿ ತಲೆ ಎತ್ತಿ ಎತ್ತುಗಳ ಕಡೆ ನೋಡುತ್ತಾ, ದೈನ್ಯ ಕಟಾಕ್ಷವನ್ನು ತಂದೆಯ ಮೇಲೆ ಬೀರಿದಳು.

'ಮಗೂ! ಹೊತ್ತಾಯ್ತು ಬಾ, ದೇವರು ನಿನ್ನನ್ನು ಮೆಚ್ಚಿದ್ದಾರೆ' ಎಂದು ರಾಮಾಚಾರ್ಯರು ಹೇಳಿದರು. ಲಕ್ಷ್ಮಿದೇವಿ ಅವರೊಡನೆ ಬಂದಳು.

ಕೇಶವಮೂರ್ತಿ ಲಕ್ಷ್ಮಿದೇವಿಯುವರ ವಿವಾಹವು ಸಾಂಗವಾಗಿ ನೆರವೇರಿತು. ಬಂದಿದ್ದವರೆಲ್ಲರಿಗೂ ಉಡುಗೊರೆಗಳು ಬಂದುವು. ಹನುಮ ಈರಮ್ಮನಿಗೂ ರಾಮಾಚಾರ್ಯರು ರೇಷ್ಮೆಯಂಚಿನ ಜತೆ ಪಂಚೆ ಮತ್ತು ಸೀರೆಯನ್ನು ಉಡುಗೊರೆಯಾಗಿ ಕೊಟ್ಟರು.

* * * *

ಬೀಗರನ್ನು ಬೀಳ್ಕೊಡಲು ಎಲ್ಲರೂ ದಾರಿಯಲ್ಲಿಯೇ ಇದ್ದ ಊರ ಹೊರಗಿನ ಕೆರೆಯ ವರೆಗೂ ಬಂದರು. ನೂತನ ದಂಪತಿಗಳು ಕೆರೆಯ ಬಳಿ ಬಂದಾಗ ಹಿಡಿದಿದ್ದ ಕೈ ಬಿಟ್ಟರು. ಗಾಡಿಗಳು ಹೊರಡಲು ಸಿದ್ಧವಾಗಿ ಮುಂದೆ ನಿಂತಿದ್ದವು. ಹನುಮನ ಗಾಡಿಯ ಬಳಿ ನಿಂತಿದ್ದ ವೃದ್ಧ ದಂಪತಿಗಳ ಬಳಿಗೆ ನೂತನ ದಂಪತಿಗಳು ಬಂದು ನಿಂತರು. ಆಗ ಲಕ್ಷ್ಮಿದೇವಿಯ ತಮ್ಮ, ತಾನು ಕೋಲಾರದಿಂದ ತಂದಿದ್ದ ಖಾದಿಯ ಮೇಜಿನ ಬಟ್ಟೆಗಳನ್ನು ತಂದು ಅಕ್ಕನ ಕೈಗೆ ಕೊಟ್ಟನು. ಆಕೆ ನಸುನಗುತ್ತಾ ಇನಿಯನ ಕಡೆ ಓರೆ ನೋಟವನ್ನು ಬೀರಿ ತಮ್ಮನಿಗೆ, 'ಇವರನ್ನು ಇಲ್ಲಿಗೆ ಕರೆತಂದ ನಮ್ಮ ಭಾಗ್ಯಕ್ಕೆ ಕಾರಣವಾದ ಹನುಮನ ಎತ್ತುಗಳಿಗೆ ಉಡುಗೊರೆಯಾ?' ಎಂದು ತನ್ನಿನಿಯನ ಕೈಗೆ ಕೊಟ್ಟಳು. ಪ್ರೇಯಸಿಯ ಇಂಗಿತವನ್ನರಿತ ರಸಿಕ ಕೇಶವಮೂರ್ತಿ ಬಂದೊಂದನ್ನು ಬಂದೊಂದು ಎತ್ತಿನ ಮೇಲೆ ವಿಶಾಲವಾಗಿ ಹಾಕಿದನು. ಎತ್ತುಗಳ ಬಿಳಿಯ ಬಣ್ಣಕ್ಕೂ, ಬಟ್ಟೆಯ ನೀಲಿಯ ಬಣ್ಣಕ್ಕೂ, ಬಟ್ಟೆಗಳ ಅಂಚುಗಳಿಗೆ ಮಾಡಿರುವ ಬಿಳಿಯ ಕಸೂತಿಯ ಹೂಗಳಿಗೂ ಬಹು ಚೆನ್ನಾಗಿ ಒಪ್ಪುತ್ತಿತ್ತು.

ಈ ಸೊಬಗನ್ನು ನೋಡಿದ ಹನುಮ, 'ಈರಿ! ನಮ್ಮ ಎತ್ತುಗಳ್ಗೂ ಲಚ್ಮಿದೇವಮ್ಮನ ಉಡುಗರೆ ಬಂತು! ನಿನ್ನ ಕಂಬ್ಳೀನ ನೋಡೇ ಮೆಚ್ಚಿದ ಸರಕಾರ ಇದನ್ನು ನೋಡಿದ್ರೆ ಇನ್ನೆಷ್ಟು ಮೆಚ್ಚುತ್ತಿತ್ತೋ!!' ಎಂದನು.

ಬೀಗರೆಲ್ಲರೂ ಗಾಡಿಗಳಲ್ಲಿ ಕುಳಿತರು. ಹನುಮನ ಗಾಡಿಯಲ್ಲಿ ಮದುಮಗ, ಅವನ ಅಜ್ಜ ಅಜ್ಜಿ, ಈರಮ್ಮ ಕುಳಿತರು. ಹನುಮ ಮುಕಂಡೆಯ ಮೇಲೆ ಕುಳಿತ. ಗಾಡಿಗಳೆಲ್ಲವೂ ಹೊರಟವು.

ತನ್ನ ತಂದೆ ತಾಯಿಗಳೊಡನೆ ನಿಂತಿದ್ದ ಲಕ್ಷ್ಮೀದೇವಿ ತನ್ನ ಉಡುಗೊರೆಯಿಂದ ಶೋಭಿಸುತ್ತಿದ್ದ ಎತ್ತುಗಳನ್ನು ನೋಡಿ, ಅವು ಮುಂದೆ ಹೋಗಲು ತನ್ನ ತೊಯ್ದ ಕಣ್ಣಿನ ಕಟಾಕ್ಷವನ್ನು ಇನಿಯನ ಮೇಲೆ ಬೀರಿದಳು. ಹೊರಟ ಗಾಡಿಯಲ್ಲಿ ಕುಳಿತಿದ್ದ ಕೇಶವಮೂರ್ತಿಯು ತನ್ನಿನಿಯಳಿಗೆ ಪ್ರೇಮವನ್ನು ಕರವಸ್ತ್ರದಿಂದ ಕಣ್ಣೊರಸಿಕೊಳ್ಳುವುದರಿಂದಲೇ ಪ್ರತ್ಯುತ್ತರವಾಗಿತ್ತನು.

—

# ಪತಿಪರಾಯಣೆ

೧

ಕಮಲೆ ವೀಣೆಯಲ್ಲಿ '......ಎಲ್ಲರ ಕಾಯುವ ನೀನೆ ಮುಕುಂದ ಎಂಬ ಹಾಡನ್ನು ನುಡಿಸುತ್ತಾ, ಅದರೊಂದಿಗೆ ತಾನು ಹಾಡುತ್ತಾ ಇದ್ದಳು ಆಗ ತಂಗಾಳಿಯು ಮೆಲ್ಲಮೆಲ್ಲನೆ ಬೀಸಿ, ಮನೆಯ ಮುಂದಿರುವ ಹೂಗಿಡ ಗಳಲ್ಲಿರುವ ಪುಷ್ಪ ಸೌರಭವನ್ನು ಗಳಿಸಿ, ಆ ತರುಣಿಯ ಮೇಲೆ ಬೀಸಿ, ಅವ ಳಿಗೆ ಆಹ್ಲಾದವನ್ನುಂಟುಮಾಡುತ್ತಿತ್ತು. ಆ ಕಮ್ಮಲರು ಮುಗ್ಧೆಯ ಮುಂಗುರುಳಲ್ಲಿ ಉಯ್ಯಾಲಿಸುತ್ತಿತ್ತು ಅವಳ ಮನೋಹರ ಗಾನವನ್ನು ಕೇಳಿ, ಮನೆಯ ಮುಂದಿರುವ ಗಿಡಬಳ್ಳಿಗಳೆಲ್ಲಾ ಅಲ್ಲಾಡುತ್ತಿರುವುದನ್ನು ನೋಡಿದರೆ ಪ್ರಕೃತಿದೇವಿಯೂ ಸಹ ಆ ನವತರುಣಿಯ ಇಂಚರಕ್ಕೆ ತಲೆ ತೂಗುತ್ತಿರುವಳು ಎನ್ನಬಹುದಾಗಿತ್ತು.

ಕಮಲೆ ಹಾಡನ್ನು ಮುಗಿಸಿರಲಿಲ್ಲ. ಇನ್ನೂ ಒಂದು ನುಡಿ ಇತ್ತು. ಆಗ ಅವಳತ್ತೆ ಕಾವೇರಮ್ಮನು ಮನೆಯೊಳಗಿನಿಂದ ಒಂದು ಅಧಿಕಾರದ ಸ್ವರದಿಂದ, 'ನಿನಗೆ ಯಾವಾಗಲೂ ವೀಣೆಯೇನೆ? ಮಗೂ ಕಾಲೇಜಿಗೆ ಬೆಳಿಗ್ಗೆ ಒಂದಷ್ಟು ಬೆಂದದ್ದೋ ಬೇಯದ್ದೋ ತಿಂದು ಹೋಗಿಲ್ಲವೇ? ಅವನಿಗೆ ಕಾಫಿ ಉಪ್ಪಿಟ್ಟು ಮಾಡಿಡು, ಹೋಗೆ. ನಿತ್ಯವೂ ನಾನು ಹೇಳುತ್ತಿರು ವುದೇ ಒಂದು ಕೆಲಸವಾಗಿ ಹೋಗಿದೆ. ಏಳೇ ಕಮಲಾ!' ಎಂದು ಗದರಿದಳು.

'ಅವರು ಬರುವ ಹೊತ್ತಿಗೆ ಮಾಡಿಡುತ್ತೇನೆ, ಅತ್ತೆ.'

'ಅವನು ಬರೋ ವೇಳೆಗೆ ಮಾಡಿಡುತ್ತೀಯಾ? ಆಗಲಿ, ನಾರಾಯಣ ಬರಲಿ, ನಿನ್ನ ಮಟ್ಟ ಹಾಕಿಸುತ್ತೇನೆ.' ಎಂದು ರೋಷದಿಂದ ಹೇಳಿ ಪಕ್ಕದ ಮನೆಗೆ ಹೋದಳು.

ಕಮಲೆ ಎದ್ದು ವೀಣೆಯನ್ನು ತನ್ನ ಕೊಟಡಿಯಲ್ಲಿಟ್ಟು, ಕನ್ನಡಿಯ ಮುಂದೆ ನಿಂತು ತನ್ನ ಮುಂಗುರುಳನ್ನು ಕೈಯಿಂದ ಸವರಿ, ಸೀರೆಯ ಸೆರಗನ್ನು ಸರಿಪಡಿಸಿಕೊಳ್ಳುತ್ತಾ, ವೀಳ್ಯವನ್ನು ಸವಿದಿದ್ದ ರಂಗಿನ ತುಟಿಗಳನ್ನು ನೋಡಿಕೊಳ್ಳುತ್ತಾ, ಹಣೆಯಲ್ಲಿ ಒಂದು ಚಿಕ್ಕ ಸಾದು-ಬೊಟ್ಟನ್ನಿಟ್ಟುಕೊಂಡು, ತನ್ನ ಸೊಬಗನ್ನು ಒಮ್ಮೆ ಕನ್ನಡಿಯಲ್ಲಿ ನೋಡಿಕೊಂಡು, 'ಅವರು ಬಂದರೆ ಹೊಡೆಸುವಳಂತೆ! ಇವಳೆಷ್ಟು ಚಾಡಿಯಾದರೂ ಹೇಳಿ ಅವರನ್ನು ರೇಗಿಸಲಿ, ನಾನು ನೋಡಿದರೆ ಸಾಕು, ಅವರ ಕೋಪವನ್ನೆಲ್ಲಾ ಮಾಯ ಮಾಡಿಬಿಡುತ್ತೇನೆ.' ಎಂದು ನಸುನಗೆಯಿಂದ ಮೆಲ್ಲಮೆಲ್ಲನೆ ಉಸುರುತ್ತಾ ಮನೆಯ ಮುಂಬಾಗಿಲನ್ನು ಹಾಕಿ, ಅಡಿಗೆ-ಮನೆಯೊಳಕ್ಕೆ ಹೋಗಿ, ಒಂದಷ್ಟು ಕಾಫಿ ಉಪ್ಪಿಟ್ಟನ್ನು ಮಾಡಿ, ತನ್ನ ಕೊಟಡಿಯಲ್ಲಿಟ್ಟು ಪುನಃ ವೀಣೆಯನ್ನು ತೆಗೆದುಕೊಂಡು ನುಡಿಸಲೆಳಸಿದಳು.

ಸ್ವಲ್ಪ ಹೊತ್ತಾದ ಮೇಲೆ ಪಕ್ಕದ ಮನೆಗೆ ಹೋಗಿದ್ದ ಕಾವೇರಮ್ಮನು ಬಂದು, ಕಮಲೆ ಕುಳಿತು ವೀಣೆ ಬಾರಿಸುತ್ತಾ ಇದ್ದುದನ್ನು ನೋಡಿ, 'ಇನ್ನೂ ಎದ್ದು ನಾನು ಹೇಳಿದ್ದನ್ನು ಮಾಡಲಿಲ್ಲವೇನೆ?' ಎಂದು ಕಣ್ಣಿನಿಂದ ಕೋಪದ ಕಿಡಿ ತೂರುತ್ತಾ ಕೇಳಿದಳು.

ಉತ್ತರವಿಲ್ಲ. ಹಾಡುವಿಕೆಯೂ ಮತ್ತು ವೀಣೆಯನ್ನು ನುಡಿಸುವಿಕೆಯೂ ಇನ್ನೂ ಜೋರಾದುವು.

'ಇವಳಿಗೆ ಎಷ್ಟು ಗರ್ವ! ಎಷ್ಟಾದರೂ ಗರ್ವಗಾತಿಯ ಮಗಳು! ತಂದೆ ಇದ್ದಿದ್ದರೆ ಇನ್ನೆಷ್ಟು ಜಂಬ ಇರುತ್ತಿತ್ತೊ! ಮಾವ ಎಂದರೆ ಭಯವಿಲ್ಲ; ಅತ್ತೆ ಎಂದರೆ ಮೊದಲೇ ಇಲ್ಲ. ಇಷ್ಟಕ್ಕೂ ಕಾರಣ ನಾರಾಯಣ ಇವಳ ಬೆಡಗನ್ನು ಮೆಚ್ಚಿ ಬೆರಗಾಗಿರುವುದರಿಂದಲೇ ಅಲ್ಲವೇ? ಇವಳ ತಾಯಿ ನನ್ನನ್ನು ಎಷ್ಟು ಬೈದಿದ್ದಾಳೆ. ಆಗಲಿ..' ಎಂದುಕೊಂಡು, 'ಎದ್ದು ಹೋಗಿ ಕಾಫಿ ಮಾಡುತೀಯೋ ಇಲ್ಲವೋ?' ಎಂದು ಗದರಿದಳು.

'ಅದೆಲ್ಲಾ ನಿನಗೆ ಯಾಕೆ ಹೋಗತ್ತೆ'

'ನನಗೆ ಯಾಕೇ? ಅವನು ಬರಲಿ, ನಿನಗೆ ಮಾಡಿಸುತ್ತೇನೆ.'

'ಏನಾದರೂ ಮಾಡಿಕೋ ಹೋಗು.'

ಈ ಉತ್ತರವನ್ನು ಕೇಳುತ್ತಲೇ ಕಾವೇರಮ್ಮನಿಗೆ ರೇಗಿಹೋಯಿತು. ಮಗನು ಬಂದ ಮೇಲೆ ದೂರು ಹೇಳಿ ಹೊಡೆಸಬೇಕೆಂದು ಮನಸ್ಸು ಮಾಡಿಕೊಂಡು ಮನೆಯ ಮುಂಭಾಗದಲ್ಲಿರುವ ಸಂಪಿಗೆ ಮರದ ಕೆಳಗಿರುವ ಕಲ್ಲು-ಮಂಚದ ಮೇಲೆ ಕುಳಿತಳು. ಐದು ಗಂಟೆಯಾಯಿತು. ನಾರಾಯಣನು ಕಾಲೇಜಿನಿಂದ ಬಂದು ಮನೆಯ ಮುಂಭಾಗದಲ್ಲಿ ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ, ಸರಸ್ವತಿಯಂತೆ ವೀಣೆಯೊಡಗೂಡಿ ಮಧುರ ಸ್ವರದಿಂದ ಹಾಡುತ್ತಿರುವ ತನ್ನ ಮನೋರಮೆಯ ಹಾಡನ್ನು ಕೇಳುತ್ತಾ, ಮಂದಸ್ಮಿತ ವದನನಾಗಿ ತಲೆದೂಗಿ ಮನೆಯನ್ನು ಹೊಕ್ಕನು. ಕಮಲೆ ಎದ್ದು ನಿಂತಳು. ಕಾವೇರಮ್ಮ ಕಮಲೆಯ ಬಳಿ ಬಂದು ನಿಂತಳು. ನಾರಾಯಣನು ತನ್ನ ಕೊಟಡಿಯೊಳಕ್ಕೆ ಹೋಗಿ, ಕೋಟು ಟೋಪಿಗಳನ್ನು ಕಳಚಿ, ತಾಯಿ ಮತ್ತು ಹೆಂಡತಿ ನಿಂತಿದ್ದ ಬಳಿ ಬಂದನು. ಆಗ ಕಾವೇರಮ್ಮ 'ನೋಡೋ ನಾಣಿ, ಇವಳು ನನ್ನ ಹೊಲಸು ಮಾತುಗಳಿಂದ ಏನೇನೋ ಬಯ್ದು ನಾನು ಹೇಳಿದ ಒಂದು ಕೆಲಸವನ್ನೂ ಮಾಡದೆ ಇದ್ದಾಳೆ. ನಿತ್ಯವೂ ಅವರಿಂದ ಒಂದು ಬೈಗಳ ಕೇಳದೆ ಹೋದರೂ ಇವಳಿಂದ ತಿನ್ನಬೇಕಾಗಿದೆ. ನೀವೇ ಈ ಮನೆಯಲ್ಲಿದ್ದುಕೊಳ್ಳಿ, ನಾನು ನಮ್ಮಣ್ಣನ ಮನೆಗೆ ಹೋಗುತ್ತೇನೆ.' ಎಂದು ಸಪ್ಪೆ-ಮುಖ ಹಾಕಿಕೊಂಡು ಕಣ್ಣಿನಲ್ಲಿ ನೀರು ಸುರಿಸುತ್ತಾ ಹೇಳಿದಳು.

'ಕಮಲಾ, ಅಮ್ಮ ಹೇಳಿದಂತೆ ಕೇಳಿ. ಇನ್ನೊಂದಾದರೂ ನೀನು ಬಯ್ಯೋದನ್ನು ಕೇಳಿದರೆ ಚಚ್ಚಿ ಮನೆ ಬಿಟ್ಟೋಡಿಸುತ್ತೇನೆ. ಅಪ್ಪಾ, ನೀನು ಹೋಗು. ಅವಳು ಇನ್ನೊಂದಾದರೂ ನಿನ್ನ ಮಾತು ಕೇಳದೆ ಹೋದರೆ ನನ್ನ ಸಂಗಡ ಹೇಳು. ಅವಳನ್ನು ತರಾಟೆಗೆ ತೆಗೆದುಕೊಳ್ಳುತ್ತೇನೆ.' ಎಂದು ಕೋಪವನ್ನು ನಟಿಸಿ ಹೇಳಿದನು.

ಕಾವೇರಮ್ಮನು ಅಡಿಗೆ-ಮನೆಯೊಳಕ್ಕೆ ಹೋದಳು. ನಾರಾಯಣನು ತಾಯಿಯ ಬಳಿಗೆ ಬಂದನು. ಆಗ ಕಾವೇರಮ್ಮನು 'ಏನೋ ನಾಣೀ! ನೀನೂ ಅವಳೋನೆ ಆಗಿ ಹೋಗಿ ನಮ್ಮನ್ನೆಲ್ಲಾ ಬಿಟ್ಟುಬಿಟ್ಟೆ. ದಂಡಿಸಬಾರದೇನೋ' ಎಂದಳು. ಕಮಲೆ ಅಡಿಗೆ-ಮನೆಯ ಹತ್ತಿರಕ್ಕೆ ಬಂದು ಇವರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದಳು.

'ಅಮ್ಮಾ, ಅವಳನ್ನು ದಂಡಿಸಬಹುದು. ಪಾಪ, ಇನ್ನೂ ಚಿಕ್ಕ ಹುಡುಗಿ. ಅವಳಿಗೆ ಕೆಲಸ ಕಲಿಸಬೇಕಮ್ಮಾ. ಅವಳನ್ನು ಸುಮ್ಮನೆ ಬೈದರೆ ನಿನ್ನ ದಾರಿಗೆ ಬರುವುದಿಲ್ಲ. ಚೆನ್ನಾಗಿ ಮಾತನಾಡಿಸಿ ನಿನ್ನ ದಾರಿಗೆ ತಂದು ಕೊಳ್ಳಬೇಕಮ್ಮಾ.'

'ಎಷ್ಟೋ ಒಳ್ಳೆಯ ಮಾತಿನಿಂದ ಹೇಳುತ್ತೇನೋ, ನಾಣಿ. ನನ್ನ ಮಾತೆಂದರೆ ಅವಳಿಗೆ ಲಕ್ಷ್ಯವೇ ಇಲ್ಲ.'

'ಈ ಹೊತ್ತು ರಾತ್ರಿ ಯಾವ ಕೆಲಸವನ್ನಾದರೂ ಹೇಳಮ್ಮ. ಅವಳು ಮಾಡದೆ ಹೋದರೆ ನನಗೆ ಹೇಳು.'

'ಆಗಲಿ' ಎಂದು ನಿಟ್ಟುಸಿರು ಬಿಟ್ಟಳು.

'ಏನಾದರೂ ತಿಂಡಿ ಕೊಡಮ್ಮ.'

'ಏನಾದರೂ ಮಾಡಿಡು ಎಂದು ಹೇಳಿದ್ದೆ. ಮಾಡಿಟ್ಟಿದ್ದಾಳೇನೋ ಹೋಗಿ ಕೇಳು.'

ನಾರಾಯಣನು ಅಡಿಗೆ-ಮನೆಯನ್ನು ಬಿಟ್ಟು ತನ್ನ ಹೆಂಡತಿಯ ಬಳಿಗೆ ಬಂದನು. ಕಮಲೆ ಕಣ್ಣುಗಳನ್ನು ಕೈಗಳಿಂದ ಉಜ್ಜಿಕೊಳ್ಳುತ್ತಾ, ತಲೆ ಬಗ್ಗಿಸಿಕೊಂಡು ಮಂಚದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಕುಳಿತಿದ್ದಳು. ನಾರಾಯಣನು ಕೊಟಡಿಯ ಬಾಗಿಲನ್ನು ಹಾಕಿ, ಅವಳ ಪಕ್ಕದಲ್ಲಿ ಕುಳಿತು, ಅವಳ ಕತ್ತಿನ ಮೇಲೆ ಕೈ ಹಾಕಿ, 'ನಾನು ಹೋಗಲೆ ಕಮಲು?' ಎಂದು ನಸುನಗೆಯಿಂದ ಕೇಳಿದನು.

'ಬೇಡ' ಎಂದು ಮೆಲ್ಲನೆ ಹೇಳಿ ತಲೆಯನ್ನು ಮೇಲಕ್ಕೆತ್ತಿ, ನೀರಿನಿಂದ ತೊಯ್ದಿದ್ದ ತನ್ನ ಕಡೆಗಣ್ಣಿನ ಕಟಾಕ್ಷವನ್ನು ಕಮಲೆ ಬೀರಿದಳು.

'ಏನು ಕಮಲು?'

'ಏನೂ ಇಲ್ಲ.'

'ಹಾಗಾದರೆ ಯಾಕಳುತ್ತೀ?'

ಉತ್ತರವಿಲ್ಲ.

'ನೀನು ಓದಿದ ಹುಡುಗಿ. ಅಮ್ಮನಿಗೆ ಸರಿಯಾಗಿ ನಡೆದುಕೊಂಡು ಅವರಿಗೂ ನನಗೂ ಸಂತೋಷವನ್ನುಂಟುಮಾಡಬೇಕು.'

'ಆಗಲಿ.'

'ಈ ಹೊತ್ತಿನಿಂದ ಅವರ ಮಾತನ್ನು ಮೀರಬಾರದು.'

'ಅವರ ಮಾತನ್ನು ಎಂದು ಮೀರಿದ್ದೇನೆ?'

'ಇಂದೇ.'

'ಅದು ಹೇಗೆ?'

'ತಿಂಡಿ ಮಾಡಿಡು ಎಂದು ಹೇಳಿದ್ದರಂತಲ್ಲ; ಮಾಡಿಟ್ಟಿದ್ದೀಯಾ?'

'ಹುಂ, ನೋಡಿ' ಎಂದು ಹೇಳಿ, ಮಂಚದ ಕೆಳಗಿನಿಂದ ಒಂದು ಚೆಂಬು, ಕೆಲವು ಬಟ್ಟಲಗಳು, ಒಂದು ತಟ್ಟೆಯನ್ನು ತೆಗೆದು ಮಂಚದ ಮೇಲಿಟ್ಟಳು ತಟ್ಟೆಯಲ್ಲಿ ರವೆ ಉಪ್ಪಿಟ್ಟು, ಒಂದು ಸೇಬು, ನಾಲ್ಕು ಬಾಳೆ ಮತ್ತು ಒಂದು ಗೊಂಚಲು ದ್ರಾಕ್ಷಿ ಇದ್ದುವು.

'ನೀನು ಒಳ್ಳೆ ಹುಡುಗಿ ಕಾಣೆ!' ಎಂದು ಹೇಳಿ, ಅವಳ ವಿಕಸಿತ ಮುಖವನ್ನು ನೋಡುತ್ತಾ, 'ನೀನೂ ತೆಗೆದುಕೋ ಕಮಲು' ಎಂದನು.

ಇಬ್ಬರೂ ಸರಸ ಸಲ್ಲಾಪಗಳಿಂದ ತಿನ್ನತೊಡಗಿದರು. ದ್ರಾಕ್ಷಿಯನ್ನು ತಿನ್ನುತ್ತಾ ನಾರಾಯಣನು, 'ಸೇಬು, ಬಾಳೆಯೇನೋ ನಮ್ಮ ಮನೇವಾಯಿತು. ದ್ರಾಕ್ಷಿ ಎಲ್ಲಿಯದು?' ಎಂದು ಮುಗುಳುನಗೆಯಿಂದ ಕೇಳಿದನು.

'ಲಕ್ಷ್ಮಮ್ಮ ಮನೆಯಲ್ಲಿ ಈ ದಿನ ಸತ್ಯನಾರಾಯಣ ಪೂಜೆ ಮಾಡಿದರು. ಅತ್ತೆಯವರ ಅನುಮತಿಯನ್ನು ಪಡೆದು, ಅವಳು ನನ್ನನ್ನು ಬಲಾತ್ಕಾರದಿಂದ ತನ್ನ ಮನೆಗೆ ಕರೆದುಕೊಂಡು ಹೋದಳು. ಒಂದು ಹಾಡು ಹೇಳಿದೆ. ಪೂಜೆಯಾದ ಮೇಲೆ ದೇವರ ಪ್ರಸಾದ ಕೊಟ್ಟು ಈ ದ್ರಾಕ್ಷಿ-ಗೊಂಚಲು ಕೊಟ್ಟಳು.' ಎಂದು ವೈಯ್ಯಾರದಿಂದ ಹೇಳಿದಳು.

'ಇದು ನಿನ್ನ ಹಾಡುಗಾರಿಕೆಗೆ ಬಹುಮಾನವೋ?'

'ನೀವು ತಮಾಷೆ ಮಾಡೋಕೆ ಸರಿ' ಎಂದು ಮುಖವನ್ನು ಓರೆ ಮಾಡಿಕೊಂಡಳು.

'ತಮಾಷೆ ಅಲ್ಲವೇ ಬೆಪ್ಪೆ. ಯಾರಿಗೆ ಬಹುಮಾನವಾಗಿ ಕೊಟ್ಟರೋ ಅವರೇ ಅದನ್ನು ಅನುಭವಿಸಬೇಕು.'

'ನಾನು ಅದನ್ನು ನಿಮಗೆ ಬಹುಮಾನವಾಗಿ ಕೊಟ್ಟಿದ್ದೇನೆ.' ಎಂದು ಅವನನ್ನು ಓರೆಗಣ್ಣಿನಿಂದ ನೋಡುತ್ತಾ ಹೇಳಿದಳು.

'ನನ್ನ ಯಾವ ಗುಣಕ್ಕಾಗಿ ಈ ಬಹುಮಾನ?'

'ನಿಮಗೂ ಆ ನಾರದರಿಗೂ ಇರುವ ಜ್ಞಾತಿ ಸಂಬಂಧಕ್ಕಾಗಿ!' ಎಂದು ನಸುನಗೆಯಿಂದ ಹೇಳಿದಳು.

ನಾರಾಯಣನು ನಕ್ಕು, 'ಈ ವಿದ್ಯೆಗಳಲ್ಲೆಲ್ಲಾ ನೀನು ಮೊದಲನೆಯವಳೇ' ಎಂದು ಹೇಳುತ್ತಾ, ಅವನೂ, ಕಮಲೆಯೂ ತಿಂಡಿಯನ್ನೆಲ್ಲಾ ಮುಗಿಸಿದರು.

ನಾರಾಯಣನ ತಂದೆ ಸುಂದರರಾಯನು ಮನೆಗೆ ಬಂದನು. ಕಾವೇರಮ್ಮನು 'ಕಮಲಾ!' ಎಂದು ಕೂಗಿದಳು. ಕಮಲೆ ತಕ್ಷಣ ಎದ್ದು ಹೋಗಿ 'ಏನತ್ತೆ?' ಎಂದು ಕೇಳಿದಳು.

'ಅವನ ಲೆಕ್ಚರು ಬಹಳವಾಗಿಯೇ ಆಗಿದೆ!' ಎಂದುಕೊಂಡು, 'ಅವರಿಗೇನಾದರೂ ತಿಂಡಿ ಕೊಡೆ' ಎಂದಳು.

ಕಮಲೆ ತನ್ನ ಕೊಟಡಿಗೆ ಹೋಗಿ, ಸುಂದರರಾಯನಿಗಾಗಿ ಇಟ್ಟಿದ್ದ ಕಾಫಿ, ಉಪ್ಪಿಟ್ಟು ಮತ್ತು ಕೆಲವು ಹಣ್ಣುಗಳನ್ನು ತಂದು, ಮಾವನ ಮುಂದಿಟ್ಟು ಕೊಟಡಿಯೊಳಕ್ಕೆ ಹೋದಳು.

ಸುಂದರರಾಯನು 'ಕಮಲಾ ಬಲು ಒಳ್ಳೆಯ ಹುಡುಗಿ! ಬುದ್ಧಿಯಲ್ಲಿ ಬಲು ಚುಟಿ. ನನ್ನನ್ನು ಕಂಡರೆ ಎಷ್ಟು ಪ್ರೀತಿ!' ಎಂದುಕೊಂಡನು.

---

೨

ಮನೆಯಲ್ಲಿ ಸುಂದರರಾಯನೂ, ನಾರಾಯಣನೂ ಊಟ ಮಾಡುತ್ತಿದ್ದರು. ಕಾವೇರಮ್ಮನು ಬಡಿಸುತ್ತಿದ್ದಳು. ಕಮಲೆ ಗಂಡನ ಜೇಬಿನಿಂದ ಫೌನ್ಟನ್-ಪೆನ್ನನ್ನು ತೆಗೆದುಕೊಂಡು, ತನ್ನ ಕೊಟಡಿಯಲ್ಲಿನ ಕುರ್ಚಿಯ ಮೇಲೆ ಕುಳಿತು ಬರೆಯುತ್ತಿದ್ದಳು. ಕಮಲೆ ಬರೆಯುತ್ತಿರುವಲ್ಲಿ ಕಾವೇರಮ್ಮನು ಬಂದು ಕೊಟಡಿಯಲ್ಲಿ ಇಣಿಕಿ ನೋಡಿ, ಹೊರಟುಹೋದಳು.

ಕಮಲೆ ಕಾಗದವನ್ನು ಬರೆದು ಮುಗಿಸಿ, ಒಂದು ಕವರಿನೊಳಗಿಟ್ಟು ಅದರ ಮೇಲೆ ವಿಳಾಸವನ್ನು ಬರೆದು ಮುಗಿಸಿ ಅದನ್ನು ಪುನಃ ನೋಡುತ್ತಿ

ದ್ದಳು. ಆಗೊಬ್ಬರು ಹಿಂದಿನಿಂದ ಬಂದು ಇವಳೆರಡು ಕಣ್ಣುಗಳನ್ನೂ ಮುಚ್ಚಿದರು. ಕಮಲೆ ತನ್ನೆರಡು ಕೈಗಳಿಂದ ತನ್ನ ಕಣ್ಣನ್ನು ಮುಚ್ಚಿದ್ದ ಎರಡು ಕೈಗಳನ್ನೂ ಹಿಡಿದು ಬಿಡಿಸಿಕೊಳ್ಳಲು ಪ್ರಯತ್ನಪಟ್ಟಳು. ಸಾಗಲಿಲ್ಲ. 'ನಿನ್ನ ಹುಡುಗಾಟ ಸಾಕು, ಬಿಡೇ ಲಕ್ಷ್ಮೀ, ಬಿಡೇ ಲಕ್ಷ್ಮೀ' ಎಂದು ಹಲವು ಬಾರಿ ಹೇಳಿದಳು. ಆಗ 'ಕಮಲಾ!' ಎಂದು ಕಾವೇರಮ್ಮನು ಕೂಗಿದಳು.

'ಅತ್ತೆಯವರು ಕರೆಯುತ್ತಿದ್ದಾರೆ. ಬಿಡೇ ಲಕ್ಷ್ಮೀ' ಎಂದು ಪುನಃ ಹೇಳಿದಳು.

'ಲಕ್ಷ್ಮಿಯಲ್ಲವೇ ಬೆಪ್ಪೆ. ಅವಳ ಗಂಡ' ಎಂದು ನಸುನಗೆಯಿಂದ ಕೂಡಿದ ಪ್ರತ್ಯುತ್ತರವು ಬಂದಿತು.

'ನಿಮ್ಮ ಹುಡುಗಾಟ ಸಾಕು ಬಿಡಿ ದಮ್ಮಯ್ಯ!'

ನಾರಾಯಣನು ತನ್ನ ಕೈಗಳನ್ನು ತೆಗೆದನು. ಕಮಲೆ ಏಳಲು ಹೋದಳು

'ಕುಳಿತುಕೋ ಕಮಲು' ಎಂದು ಹೇಳಿ ಅವಳ ಕೈಯ್ಯನ್ನು ಹಿಡಿದು ಕೊಂಡನು.

'ಇಲ್ಲ, ಅತ್ತೆಯವರು ಕರೆಯುತ್ತಿದ್ದಾರೆ.'

'ಕರೆದರೆ ಕರೆದುಕೋತಾರೆ. ನೀ ಕುಳಿತುಕೊ'

'ನಿಮಗೆ ಊಟಾಯಿತೋ ಇಲ್ಲವೋ?' ಎಂದು ನಗುತ್ತಾ ಕೇಳಿದಳು.

'ನಿನಗೆ ಹಸಿವೇನು?'

'ಇಲ್ಲ, ನಿಮ್ಮೊಡನಿದ್ದರೆ ನನಗೆ ಹಸಿವೇ ತೋರುವುದಿಲ್ಲ.'

'ಹಾಗಾದರೆ ಕುಳಿತುಕೋ ಮತ್ತೆ'

'ನೀವು ಕುಳಿತುಕೊಳ್ಳಿ, ನಾನು ಹೀಗೇ ಇರುತ್ತೇನೆ.'

'ಪರವಾ ಇಲ್ಲ. ನೀನೇ ಕುಳಿತುಕೊಳ್ಳೆ' ಎಂದು ಅವಳ ಕೈ ಜಗ್ಗಿ ಕುಳ್ಳಿರಿಸಿದನು.

ಕಮಲೆ ಕುರ್ಚಿಯ ಮೇಲೆ ಕುಳಿತಳು. ನಾರಾಯಣನು ಮೇಜಿನ ಮೇಲೆ ಕುಳಿತು, 'ಆ ಕಾಗದ ತಾ, ನಾನೂ ಸ್ವಲ್ಪ ನೋಡುತ್ತೇನೆ, ಹೇಗೆ ಬರೆದಿದ್ದೀಯೋ?' ಎಂದನು.

'ಉಹೂಂ, ಅದನ್ನು ನಿಮಗೆ ತೋರಿಸೋದಿಲ್ಲ' ಎಂದು ನಗುತ್ತಾ ಓರೆಗಣ್ಣಿನಿಂದ ನೋಡುತ್ತ ನಿಧಾನವಾಗಿ ಹೇಳಿದಳು.

'ತಾ ಇಲ್ಲಿ ಅಡ್ರೆಸ್ಸು ನೋಡಿ ಕೊಡುತ್ತೇನೆ.'

'ಉಹೂಂ'

'ನಾನೂ ನೋಡಬಾರದೇನೆ ಕಮಲು!'

ಸ್ವಲ್ಪ ಯೋಚಿಸಿ 'ಏನೂ ಇಲ್ಲ, ಹುಂ ನೋಡಿ' ಎಂದು ಅಡ್ರೆಸ್ಸನ್ನು ತೋರಿಸಿ ಕಾಗದವನ್ನು ಅವನ ಕೈಗೆ ಕೊಟ್ಟಳು.

'ನಿಮ್ಮಣ್ಣನಿಗೆ ತಾನೇ? ನೀನು ಬರೆಯುವುದು ಸಾವಿರ ಕ್ಷೇಮಗಳು ತಾನೆ!' ಎಂದು ಹಾಸ್ಯ ಮಾಡಿ, ಕಾಗದವನ್ನು ಹಿಂದಕ್ಕೆ ಕೊಟ್ಟು 'ಷರ್ಟು ಹಾಕಿಕೊಂಡು ಬರುತ್ತೇನೆ, ಇರು.' ಎಂದು ಹೇಳಿ ಅಂಗಳಕ್ಕೆ ಹೋದನು. 'ಕಮಲಾ!' ಎಂದು ಮತ್ತೊಮ್ಮೆ ಕಾವೇರಮ್ಮನು ಕೂಗಿದಳು. 'ಒಳ್ಳೆಯ ವಾರಂಟು!' ಎಂದು ಗೊಣಗುತ್ತಾ, ಕಮಲೆ ತಾನು ಬರೆದಿದ್ದ ಕವರನ್ನು ಮೇಜಿನ ಮೇಲಿದ್ದ ಪುಸ್ತಕದಲ್ಲಿಟ್ಟು ಮುಂದೆ ಬಂದಳು. ನಾರಾಯಣನು 'ಊಟ ಮಾಡಿಕೊಂಡು ಬಾ ಕಮಲು' ಎಂದು ತೋಟದ ಕಡೆ ಹೋದನು.

ಕಮಲೆ ಅಡಿಗೆ-ಮನೆಯೊಳಕ್ಕೆ ಹೋದಳು. ಆಗ ಕಾವೇರಮ್ಮನು 'ಊಟ ಮಾಡುವುದಕ್ಕೆ ಹೊತ್ತಾಗಲಿಲ್ಲವೇನೆ? ಎಲೆ ಹಾಕಿಕೊ. ಊರೋರಿಂದ, ಗರ್ಭಿಣಿಗೆ ಹೊತ್ತಿಗೆ ಸರಿಯಾಗಿ ತಿಂಡಿ ಹಾಕೋದಿಲ್ಲ ಅಂತಲೂ ಬೈಸಬೇಕಾ?' ಎಂದು ಹೇಳಿದಳು. ಕಾವೇರಮ್ಮನು ಬಡಿಸಿ ಕಮಲೆಯ ಕೊಟಡಿಗೆ ಹೋಗಿ ಮೇಜಿನ ಮೇಲಿದ್ದ ಪುಸ್ತಕಗಳನ್ನೆಲ್ಲಾ ಜಪ್ತಿ ಮಾಡಿ, ಕೊನೆಗೆ ಕಮಲೆಯ ಕಾಗದವನ್ನು ತೆಗೆದು ಓದಿ, 'ನಾಣೀ!' ಎಂದು ಕೂಗಿದಳು.

ನಾರಾಯಣನು ಕೊಟಡಿಯೊಳಕ್ಕೆ ಬಂದನು. ಕಾವೇರಮ್ಮನು ಕಾಗದವನ್ನು ತೋರಿಸುತ್ತಾ '....ಮಾಧವರಾಯನನ್ನು ಕೇಳಿದೆನೆಂದು ಹೇಳು....ಎಂಬುದೇನೋ' ಎಂದು ಮೆಲ್ಲನೆ ಉಸುರಿ ಕಾಗದವನ್ನು ಅವನ ಕೈಯ್ಯಲ್ಲಿಟ್ಟು ಹೊರಟುಹೋದಳು.

ನಾರಾಯಣನು ಕಾಗದದಲ್ಲಿನ ಆ ಪಂಕ್ತಿಯನ್ನು ಹಲವು ಬಾರಿ ನೋಡಿ, ನಿಟ್ಟುಸಿರನ್ನು ಬಿಡುತ್ತಾ, ಏನೇನೋ ಅರ್ಥಗಳನ್ನು ಮಾಡುತ್ತಾ ಆ ಕಾಗದವು ಹೇಗಿತ್ತೋ ಹಾಗೇ ಪುಸ್ತಕದಲ್ಲಿಟ್ಟು ಮಂಚದ ಮೇಲಿನ ಹಾಸಿಗೆಯಲ್ಲಿ ಮಲಗಿ ಮುಸುಕು ಹಾಕಿಕೊಂಡನು.

ಕಮಲೆ ಊಟ ಮಾಡಿ, ಒಂದು ತಟ್ಟೆಯಲ್ಲಿ ವೀಳೆಯದೆಲೆ, ಅಡಕೆ-ಪುಡಿ, ಮೊದಲಾದವುಗಳನ್ನು ತಂದು ಮೇಜಿನ ಮೇಲಿಟ್ಟು, ಮಂಚದ ಮೇಲೆ ಮಲಗಿದ್ದ ಗಂಡನ ಪಕ್ಕದಲ್ಲಿ ಕುಳಿತು, ಮುಸುಕನ್ನು ತೆಗೆದು ಹಾಕಿ, 'ಏಳಿ ಅಂದ್ರೆ, ಏಳಿ!' ಎಂದು ಅನೇಕ ಸಲ ಕುಲುಕಿ ಹೇಳಿದಳು. ಮರೆಯಲ್ಲಿ ಕಾವೇರಮ್ಮನು ನಿಂತು ನೋಡುತ್ತಾ, 'ಈ ದಿನದ ಮಂತ್ರ ಸರಿ ಹೋಯಿತು!' ಎಂದುಕೊಂಡು ಅಂಗಳದಲ್ಲಿ ಕುಳಿತಳು.

ಕಮಲೆ ಹಲವು ಬಾರಿ ಗಂಡನನ್ನೆಬ್ಬಿಸಿದಳು. 'ನಿದ್ದೆ—ಹೋಗೆ!' ಎಂದು ಗಟ್ಟಿಯಾಗಿ ಒಂದೇ ಸಲ ಅಂದುಬಿಟ್ಟನು. ಕಮಲೆಯು ಬಿಕ್ಕಿ ಬಿಕ್ಕಿ ಅಳಲು ಆರಂಭಿಸಿದಳು. ಅವಳ ಒಂದೆರಡು ತೊಟ್ಟು ಕಣ್ಣೀರು ಅವನ ಕೆನ್ನೆಯ ಮೇಲೆ ಬಿದ್ದಿತು. ಸ್ವಲ್ಪ ಹೊತ್ತಾದ ಮೇಲೆ ಮನಸ್ಸು ಸ್ವಲ್ಪ ಕರಗಿತೋ ಏನೋ, ಎದ್ದು ಕುಳಿತು, ಬಲು ನಿದ್ದೆ ಹೋದವನಂತೆ ಕೈಕಾಲುಗಳನ್ನೊದರುತ್ತಾ, ಆಕಳಿಸುತ್ತಾ, 'ಏನೇ ಅಳುತ್ತೀ?' ಎಂದು ಕೇಳಿ ಅವಳ ಅಳು-ಮುಖವನ್ನು ಒಮ್ಮೆ ನೋಡಿದನು.

ಉತ್ತರವಿಲ್ಲ.

'ಎಂದೂ ಇಲ್ಲದ್ದು ಈ ಹೊತ್ತೇನು ಬಲು ಅಳು?'

ಅಳುವು ಇನ್ನೂ ಜೋರಾಯಿತು.

'ನಿಮ್ಮ ತಂದೆಯನ್ನೇನಾದರೂ ನೆನೆದುಕೊಂಡೆಯೋ?'

'ಇ....ಲ್ಲ'

'ಹಾಗಾದರೆ ಮತ್ತ್ಯಾಕೆ ಅಳು?' ಎಂದು ಅವಳನ್ನು ಸಮಾಧಾನ ಪಡಿಸಿದನು.

—

೩

ದಿನಗಳು ಕಳೆಯುತ್ತಾ ಬಂದುವು. ಕಮಲೆಗೆ ಎಂಟು ತಿಂಗಳೂ ತುಂಬಿತು. ನಾರಾಯಣನಿಗೆ ಕಮಲೆಯ ಮೇಲಿದ್ದ ಪ್ರೀತಿಯು ಸ್ವಲ್ಪಸ್ವಲ್ಪ ಕಡಿಮೆಯಾಗುತ್ತಾ ಬಂದಿತು. ಅವಳನ್ನು ನೋಡಿದರೆ ಅವನಿಗೊಂದು ತರ ಜುಗುಪ್ಸೆ. ಮನೆಯಲ್ಲಿ ಊಟ ಮಾಡಿದೊಡನೆಯೇ ಹೊರಟುಹೋಗುತ್ತಿದ್ದನು. ಮೊದಲಿನ ಸರಸ ಸಲ್ಲಾಪಗಳೆಲ್ಲಾ ಕಡಿಮೆಯಾಗುತ್ತಾ ಬಂದುವು. ಇದರಿಂದ ಕಾವೇರಮ್ಮನಿಗೆ ಹಿಗ್ಗು !

ಹಾಗೆಯೇ ಕೆಲವು ದಿನಗಳು ಕಳೆದುವು. ಮೊದಲೇ ಗೊತ್ತಾಗಿದ್ದ ಶುಭ ದಿನದಲ್ಲಿ ಕಮಲೆಯ ಅಣ್ಣ ರಾಮುವು ತನ್ನ ತಂಗಿಯನ್ನು ತನ್ನ ಊರು ನಂಜನಗೂಡಿಗೆ ಕರೆದುಕೊಂಡು ಹೋಗಲು ಟ್ಯಾಕ್ಸಿಯೊಂದನ್ನು ತಂದು ಮನೆಯ ಮುಂದೆ ಬಿಟ್ಟು ಮನೆಯೊಳಗೆ ಹೊಕ್ಕನು. ಕಮಲೆ ಗಂಟು ಮೂಟೆಗಳನ್ನೆಲ್ಲಾ ಕಟ್ಟಿ ಸಿದ್ಧವಾಗಿದ್ದಳು. ಹುಡುಗಿಯರಿಗೆ ತೌರುಮನೆಯೆಂದರೆ ಎಷ್ಟು ಆಸೆ !

ರಾಮುವು ಸುಂದರರಾಯನ ಅಪ್ಪಣೆಯನ್ನು ಪಡೆದು, ಮನೆಯಲ್ಲಿ ಎಲ್ಲರಿಗೂ ಹೇಳಿ ಬರುವಂತೆ ತನ್ನ ತಂಗಿಗೆ ಹೇಳಿ ಟ್ಯಾಕ್ಸಿಯಲ್ಲಿ ಕುಳಿತನು. ಕಮಲೆ ತನ್ನ ಅತ್ತೆಗೆ ನಮಸ್ಕಾರ ಮಾಡಿ, ' ಹೋಗಿಬರುತ್ತೇನೆ, ಅತ್ತೆ. ' ಎಂದಳು ಕಾವೇರಮ್ಮನು ' ಹೂಂ ' ಎಂದಳು.

ಅಲ್ಲಿಂದ ಕಮಲೆಯು ಗಂಡನ ಬಳಿಗೆ ಬಂದು ನಿಂತಳು. ಕಾವೇರಮ್ಮನು ಬಾಗಿಲ ಬಳಿಗೆ ಬಂದಳು. ಕಮಲೆ ತನ್ನ ಎಲ್ಲಾ ವೈಯ್ಯಾರಗಳಿಂದ ಕೂಡಿದ ಎಳನಗೆಯಿಂದ ' ಹೋಗಿಬರುತ್ತೇನೆ ' ಎಂದಳು. 'ಆಗಬಹುದು ' ಎಂದನು.

ಕಮಲೆ ಕೊಟಡಿಯನ್ನು ಬಿಟ್ಟು ಮುಂದೆ ಬಂದಳು. ಕಾವೇರಮ್ಮನು ಸರ್‍ರನೆ ಕೊಟಡಿಯನ್ನು ಹೊಕ್ಕು, ಕಮಲೆಯ ಹೆಸರಿಗೆ ಬಂದಿದ್ದ ಒಂದು ಕವರನ್ನು ಮಗನ ಕೈಗೆ ಕೊಟ್ಟಳು. ನಾರಾಯಣನು ಅದನ್ನು ಒಡೆದು ಹಲವು ಬಾರಿ ಬೇಗ ಬೇಗನೆ ಓದಿ ನಿಟ್ಟುಸಿರು ಬಿಡುತ್ತಾ, ' ಅಮ್ಮಾ! ನೀನು ಅಂದು ಸೂಕ್ಷ್ಮವಾಗಿ ಹೇಳಿದ್ದು ಇಂದು ನಿಜಸ್ಥಿತಿ ತಿಳಿದಂತೆಯೇ ಆಯಿತು.

ಹೋಗಿ ತಂದೆಯವರಿಗೆ ತೋರಿಸು. ಅವಳಿಗೆ ಇನ್ನು ಮುಂದೆ ನಮ್ಮ ಮನೆ ತುಳಿಯಬೇಡವೆಂದು ಹೇಳು. ' ಎಂದು ಕಣ್ಣನ್ನು ಕೆಂಪಗೆ ಮಾಡಿಕೊಂಡು ಹೇಳಿದನು.

ಕಾವೇರಮ್ಮನು ಕಾಗದವನ್ನು ತನ್ನ ಗಂಡನ ಕೈಗೆ ಕೊಟ್ಟಳು. ಅದನ್ನು ಸುಂದರರಾಯನು ಓದಿ ನೋಡಿ ' ನಮ್ಮ ಮನೆ ಪಾಡು ಹೀಗಾಯಿತೇ ! ನಿನ್ನೆ ಕೃಷ್ಣರಾಯನ ಮನೆಯಲ್ಲಿ ಹೆಂಗಸರು ಕುಸುಪಿಸ ಎಂದು ಯಾರೋ ಒಬ್ಬ ಕಮಲೆಯ ವಿಚಾರವಾಗಿ ಮಾತನಾಡಿಕೊಳ್ಳುತ್ತಿದ್ದರು. ಆ ಕಮಲೆ ಇವಳೇ ಇರಬಹುದು ! ಆ ಶನಿಯನ್ನು ಇನ್ನು ಮನೆಗೆ ಬರಬೇಡವೆಂದು ಹೇಳು ' ಎಂದು ರೋಷದಿಂದ ಹೇಳಿ, ಬೀದಿಯ ಬಾಗಿಲ ಮುಂದೆ ತಾನೂ, ಹೆಂಡತಿಯೂ ಮಗನೂ, ನಿಂತರು. ಆಗ ರಾಮುವು ಗಟ್ಟಿಯಾಗಿ ' ಹೋಗಿ ಬರುತ್ತೇನೆ ಭಾವಾ ' ಎಂದನು. ಟ್ಯಾಕ್ಸಿಯು ಹೊರಟಿತು. ' ಮತ್ತೆ ಈ ಮನೆಗೆ ಕಾಲಿಡಬೇಡಿ ' ಎಂದು ಕಾವೇರಮ್ಮನು ಹೇಳಿದಳು. ಬಹು ಕೋಪ ದಿಂದಿದ್ದ ಸುಂದರರಾಯನೂ, ನಾರಾಯಣನೂ ಮಾತನಾಡಲಿಲ್ಲ. ಕಾವೇರ ಮ್ಮನ ಮಾತು ಅವರ ಕಿವಿಗೆ ಬಿತ್ತೊ ಇಲ್ಲವೋ !

ಮೂವರೂ ಮನೆಯೊಳಕ್ಕೆ ಬಂದರು. ಆಗ ಕಾವೇರಮ್ಮನು ' ನೋಡಿ ದಿರಾ, ಸಮಾಚಾರ ಹೇಗಿದೆ ? ' ಎಂದಳು.

' ಮುಂದೆ ಏನು ಮಾಡುವುದೋ ನಾಣೀ ? ' ಎಂದು ಸುಂದರ ರಾಯನು ಕೇಳಿದನು.

' ಎಲ್ಲಾ ನೀವು ಮಾಡಿದ್ದೇ. ಅವಳನ್ನು ನಾಣೀಗೆ ಮದುವೆ ಮಾಡ ಬೇಡಿ, ಬೇಡಿ ಎಂದು ಗಿಣಿಗೆ ಹೇಳುವಂತೆ ಹೇಳಿದೆ. ನನ್ನ ಮಾತು ಕೇಳಿದಿರಾ ? ಬಿಳೀ ತೊಗಲನ್ನು ಮೆಚ್ಚಿ ನೀವು ಆರಿಸಿ ತಂದ ಬೆಡಗನ್ನು ನೋಡಿ ! '

ನಾರಾಯಣನ ಬಾಯಲ್ಲಿ ಮಾತು ಹೊರಡದಿದ್ದರೂ ಕಣ್ಣಿನಲ್ಲಿ ನೀರು ಹರಿಯುತ್ತಿತ್ತು.

'ಹೀಗೇಕೋ ಅಳುತ್ತೀ ?' ಅವಳನ್ನು ಬಿಟ್ಟರೆ, ರತ್ನದಂತಿದ್ದಾಳೆ ಅನಂತ ರಾಯನ ಮಗಳು ಸರೋಜ. ಅವಳನ್ನು ತಂದು ಮದುವೆ ಮಾಡುತ್ತೇನೆ, ಸುಮ್ಮನಿರೋ. ಅವಳಿಗೂ ಈಗ ಹದಿಮೂರು ವರ್ಷ. ರಂಭೆಯಂತಿದ್ದಾಳೆ!' ಎಂದು ಕಾವೇರಮ್ಮ ಹೇಳಿದಳು.

'ನನಗೇನೂ ಬೇಡವ್ಮ' ಎಂದು ನಿಟ್ಟುಸಿರು ಬಿಟ್ಟನು.

ಮೂವರೂ ಸೇರಿ ಕಮಲೆಯ ಅಣ್ಣನಿಗೆ, 'ನಿನ್ನ ತಂಗಿಯ ವಿದ್ಯಮಾನಗಳೆಲ್ಲಾ ನಮಗೆ ಸ್ಪಷ್ಟವಾಗಿ ತಿಳಿದುಬಂದಿರುವುದರಿಂದ ಇನ್ನು ಮೇಲೆ ಅವಳು ನಮ್ಮ ಮನೆಗೆ ಬರಬೇಕಾಗಿಲ್ಲ.' ಎಂದು ಕಾಗದ ಬರೆದರು. ಈ ಕಾಗದವು ನಾರಾಯಣನ ಅಕ್ಷರದಲ್ಲಿಯೇ ಇದ್ದಿತು.

ಕಾಗದದ ಸಂಗತಿಯನ್ನು ಕೇಳಿದೊಡನೆಯೇ ಕಮಲೆಯ ಮನೆಯಲ್ಲಿ ದೊಡ್ಡ ಗೋಳು! ಇಷ್ಟರ ವೇಳೆಗೆ ಈ ಸಮಾಚಾರವು ಊರೆಲ್ಲಾ ಹಬ್ಬಿತು. ಕಮಲೆಯ ತಾಯಿಯು ಅತ್ತೂ ಅತ್ತೂ ಬೇಸತ್ತು, 'ಮಗೂನ ನೋಡಿಕೊಳ್ಳಿ, ದುಃಖದಿಂದ ಬಾವೀಲಿ-ಗೀವೀಲಿ ಬಿದ್ದೀತು! ಅದರ ಗೋಳನ್ನು ನೋಡಲಾರೆ! ಇದೆಲ್ಲಾ ಆ ಕಾವೇರಿ ಮಾಡಿದ್ದು!' ಎಂದು ಬಿಕ್ಕಿ ಬಿಕ್ಕಿ ಅಳುತ್ತಾ ಮಗನಿಗೆ ಹೇಳಿದಳು.

---

೪

ಕಾವೇರಮ್ಮನು ಮಗನಿಗೆ ಮದುವೆ ಮಾಡಬೇಕೆಂದು ಹಟ ಹಿಡಿದಳು. ನಿತ್ಯವೂ ನಾರಾಯಣನ ಪ್ರಾಣವನ್ನು ಹಿಂಡಲು ಪ್ರಾರಂಭಿಸಿದಳು ಅವನು 'ನನಗಿನ್ನು ಮದುವೆ ಬೇಡಮ್ಮಾ' ಎಂದು ನಿಟ್ಟುಸಿರನ್ನು ಬಿಡುತ್ತಾ ಉತ್ತರಕೊಡುತ್ತಿದ್ದನು.

ಒಂದು ದಿನ ಕಾವೇರಮ್ಮನು ಬೇಕೆಂತಲೇ ಯಾವುದೋ ಶುಕ್ರವಾರವೆಂಬ ನೆಪದಿಂದ ಅನಂತರಾಯನ ಮತ್ತು ತನಗೆ ಬೇಕಾದ ಇತರ ಮನೆಗಳ ಹೆಂಗಸರನ್ನು ಕರೆದಿದ್ದಳು. ಅಂದು ಸರೋಜಳನ್ನು ಶೃಂಗರಿಸಿ, ಅವಳಿಂದ ಅನೇಕ ಹಾಡುಗಳನ್ನು ಹೇಳಿಸಿ ಹಾಗೂ ಹೀಗೂ ನಾರಾಯಣನ ಮನಸ್ಸು ಸ್ವಲ್ಪ ಒಪ್ಪುವಂತೆ ಮಾಡಿದಳು. ಒಳ್ಳೆ ಸ್ಥಳವೆಂದು ಒಡ ಅನಂತರಾಯನೂ ಒಪ್ಪಿದನು. ಮದುವೆಯನ್ನು ಶ್ರೀರಂಗಪಟ್ಟಣದಲ್ಲಿ ಒಂದು ದಿವಸ ಮುಗಿಸುವಂತೆ ನಿಷ್ಕರ್ಷೆಯಾಯಿತು. ಲಗ್ನಕ್ಕೆ ಒಂದು ಶುಭ ದಿನವನ್ನು ಗೊತ್ತು ಮಾಡಿದರು.

ಸುಂದರರಾಯನು ತನ್ನ ಬಹು ಹತ್ತಿರದ ಬಂಧುಗಳಿಗೆ ಕೈಯಿಂದ ಬರೆದ ಲಗ್ನಪತ್ರಿಕೆಯನ್ನು ಮದುವೆಗೆ ಮೊದಲ ದಿನ ಕಳುಹಿಸಿದನು. ಲಗ್ನ ಪತ್ರಿಕೆಯ ಮೇಲೆ 'ಗುಟ್ಟು' ಎಂದು ಬೇರೆ.

ಮದುವೆಗೆ ಮೊದಲ ದಿನ ನಾರಾಯಣನು ತನ್ನ ನಾಲ್ವರು ಸ್ನೇಹಿತರನ್ನು ಕರೆದುಕೊಂಡು ಶ್ರೀರಂಗಸ್ವಾಮಿಯ ದರ್ಶನ ಮಾಡಿಕೊಂಡು ಬರುವುದಕ್ಕೆಂದು ಹೇಳಿ, ಸಾಯಂಕಾಲದ ರೈಲಿನಲ್ಲಿ ಹೊರಟನು. ಮರುದಿನ ಎಲ್ಲರೂ ಹೋಗಿ ಅಲ್ಲಿ ಲಗ್ನವನ್ನು ಮುಗಿಸಿಕೊಂಡು ಸಂಜೆಯಲ್ಲಿ ಮೈಸೂರನ್ನು ಸೇರಿದರು.

ಮಾರನೆಯ ದಿನ ಸುಂದರರಾಯನ ಮನೆಯಲ್ಲಿ ಸಮಾರಾಧನೆ. ಎಲ್ಲರೂ ಊಟಕ್ಕೆ ಕುಳಿತುಕೊಳ್ಳುವ ಸಮಯ. ಪೋಸ್ಟಿನವನು ಒಂದು ಕವರನ್ನು ನಾರಾಯಣನ ಕೈಗೆ ಕೊಟ್ಟನು. ಅದನ್ನು ಒಡೆದು ಓದುತ್ತಿರುವಲ್ಲಿ ಕಣ್ಣಿನಿಂದ ನೀರು ಧಾರೆಧಾರೆಯಾಗಿ ಸುರಿಯುತ್ತಿತ್ತು. ಕಾವೇರಮ್ಮನೂ ಸುಂದರರಾಯನೂ ಸಮಾಚಾರವೇನೆಂದು ವಿಚಾರಿಸಲು ಮಗನ ಬಳಿಗೆ ಬಂದರು. ನಾರಾಯಣನು ಕಾಗದವನ್ನು ತಂದೆಯ ಕೈಗೆ ಕೊಟ್ಟನು. ಸುಂದರರಾಯನು ಅದನ್ನು ಓದಿ, 'ಇಷ್ಟೇ ತಾನೆ! ಕಮಲೆಗೆ ಗಂಡು-ಮಗು ಆಯಿತಂತೆ! ಕಾಗದವೇಕೆ! ಪಾಪ, ನಾಣೀನ ದುಃಖಸಾಗರದಲ್ಲಿ ಮುಳುಗಿಸಿ ಕೊಲ್ಲಸೋಕೆ?' ಎಂದು ಹೆಂಡತಿಗೆ ಹೇಳಿ ಹರಿದು ಹಾಕಿದನು.

ಎಲ್ಲರೂ ಊಟಕ್ಕೆ ಕುಳಿತರು. ನಾರಾಯಣನು ತನ್ನ ನೂತನ ವಧು ಸರೋಜಳ ಪಕ್ಕದಲ್ಲಿ ಊಟಕ್ಕೆ ತಲೆ ಬಗ್ಗಿಸಿಕೊಂಡೇ ಯೋಚಿಸುತ್ತಾ ಕುಳಿತನು. ಅನಂತರಾಯನು ಅದು ಹೇಗೋ ಒಬ್ಬ ಮುದುಕಿಗೆ ಸಿಕ್ಕಿ ಬಿದ್ದನು. ಆ ಮಾತು ಈ ಮಾತು ಆದ ಮೇಲೆ ಮುದುಕಿಯು, 'ಏನು ಅನಂತಯ್ಯ, ಹೆಣ್ಣು ಬಿಟ್ಟೀಗೆ ಬಿದ್ದಿದೆ ಎಂದು ಕೊಟ್ಟಿರೋ? ನಿಮ್ಮ ಮಗಳೂ ಕಮಲೆಯ ಗತಿಯೇ ಆದರೆ ಏನು ಮಾಡುತ್ತೀರಿ?' ಎಂದು ಕೇಳಿಯೇ ಬಿಟ್ಟಳು.

'ಹಾಗಾಗುವ ಪ್ರಾಪ್ತಿಯಿದ್ದರೆ ಯಾರು ತಪ್ಪಿಸುವರಮ್ಮಾ! ಏನೋ ಕೊಟ್ಟಿದ್ದು ಆಗಿಹೋಯಿತು. ಇನ್ನು ಯೋಚಿಸಿ ಫಲವೇನು?'

'ಕಮಲೆ ಎಂಥಾ ಹುಡುಗಿ ! ರಂಭೆಯಂತಿದ್ದಳು. ಕಾವೇರಮ್ಮಾ ರಾಕ್ಷಸಿ—ಇವಳು ಕೊಂಚದವಳೇ ! ಏನೂ ಅರಿಯದ ಆ ಎಳೆ-ಮಗುವನ್ನು ಕೆಡಿಸಿದಳು. ನೀವಾದರೂ ಹುಷಾರಾಗಿರಿ.'

ಇವಳಿಂದ ತಪ್ಪಿಸಿಕೊಂಡು ಹೋದರೆ ಸಾಕೆಂದಿದ್ದ ಆತನು 'ಆಗಲಿ ಅಮ್ಮ' ಎಂದು ಹೇಳಿ, ಆ ಸ್ಥಳವನ್ನು ಬಿಟ್ಟುಬಂದು ಊಟಕ್ಕೆ ಕುಳಿತನು.

* * * *

ನಾರಾಯಣನಿಗೆ ಮದುವೆಯಾದ ಸಮಾಚಾರ ಕಮಲೆಯ ಮನೆಯಲ್ಲಿ ತಿಳಿಯಿತು. ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು. ಈ ಸಮಾಚಾರವು ತಿಳಿದ ಕೆಲವು ದಿನಕ್ಕೆ ಕಮಲೆಯ ತಾಯಿಯು ಪರಲೋಕಕ್ಕೆ ಪ್ರಯಾಣ ಮಾಡಿದಳು. ಪಾಪ ! ಅವಳು ತನ್ನ ಮಗಳ ಗತಿಯನ್ನು ಕಂಡೇ ಕೊರಗಿ ಕೊರಗಿ ಹೀಗಾದಳೋ, ಏನೋ !

ಕಮಲೆಯೊಬ್ಬಳೇ ಆಗಿದ್ದರೆ ಬಾವಿಯೋ, ಇಲ್ಲವೊ ಕೆರೆಯನ್ನೋ ನೋಡಿಕೊಳ್ಳುತ್ತಿದ್ದಳು. ಪ್ರಾಣಕ್ಕೆ ಎಳೆಗೂಸೊಂದು. ಮಗು ಬೆಣ್ಣೆಯ ವಿಗ್ರಹದಂತಿತ್ತು !

ಯಾವಾಗಲೂ ಮನೆಯಲ್ಲಿ ಅತ್ತಿಗೆ ನಾದನಿಯರಿಗೆ ಲಟಾಪಟಿ. ಕಮಲೆಗಾಯ್ತು ಸಹಸ್ರನಾಮಾರ್ಚನೆ !

ರಾಮುವು ಕಮಲೆಯನ್ನು 'ಜೀವನಾಂಶಕ್ಕೆ ದಾವೆ ಹಾಕು' ಎಂದು ಅನೇಕ ತಡವೆ ಕೇಳಿದನು. 'ಅವರೇ ಇಲ್ಲದ ಮೇಲೆ ಅವರ ಆಸ್ತಿ ನನಗೇತಕ್ಕೆ ? ಈ ಸ್ಥಿತಿಯಲ್ಲಿ ಅವರೆದುರಿಗೆ ನಿಂತು ಹೇಗೆ ಅವರಿಗೆ ಉತ್ತರ ಕೊಡಲಿ ? ಈ ಜನ್ಮದಲ್ಲಿ ಅವರನ್ನು ನಾನು ಯಾವ ಸುಖಕ್ಕೂ ಯಾಚಿಸುವುದಿಲ್ಲ. ಪತಿವ್ರತೆಯಾಗಿದ್ದರೆ ಮುಂದೆ ಅವರನ್ನೇ ಸೇರುತ್ತೇನೆ.' ಎಂದು ಕಮಲೆಯು ಕಣ್ಣೀರು ಸುರಿಸುತ್ತಾ, ಅಣ್ಣನು ಜೀವನಾಂಶದ ವಿಚಾರವನ್ನು ಎತ್ತಿದಾಗಲೆಲ್ಲಾ ಉತ್ತರ ಕೊಡುತ್ತಿದ್ದಳು. ಹೆಂಡತಿಯ ಬಲೆಯಲ್ಲಿ ಸಿಕ್ಕಿಬಿದ್ದಿದ್ದ ಅವನಿಗೂ ಕಮಲೆಯನ್ನು ಕಂಡರೆ ಅಲಕ್ಷ್ಯ ಬೇರೆ ಸ್ವಲ್ಪಸ್ವಲ್ಪವಾಗಿ ತಲೆದೋರಿತು.

—

## ೫

ನಾರಾಯಣನಿಗೆ ಆ ವರ್ಷ ಬಿ. ಎ. ಪ್ಯಾಸಾಗಿತ್ತು. ಏನೂ ಕೆಲಸ ಇಲ್ಲದಿದ್ದುದರಿಂದ ಸ್ವಲ್ಪ ಗಾಳಿ-ಸವಾರಿ ಹೋಗಿ, ನಿತ್ಯದಂತೆಯೇ ಹೊತ್ತಿಗೆ ಸರಿಯಾಗಿ ಮನೆಗೆ ಬಂದನು. ಆದರೆ ನಿತ್ಯದಂತೆಯೇ ವೀಣೆಯೊಡನೆ ಹಾಡುತ್ತಿದ್ದ ತನ್ನ ಸರೋಜಳನ್ನು ಅಂಗಳದಲ್ಲಿ ನೋಡಲಿಲ್ಲ. ಅಡಿಗೆ-ಮನೆಯೊಳಕ್ಕೆ ಹೋದನು. ತಾಯಿಯು ಕಾಫಿ ಮಾಡುತ್ತಿದ್ದಳು. ಅಲ್ಲಿಂದ ತನ್ನ ಕೊಟಡಿಗೆ ಬಂದನು. ಸರೋಜಳು ಮಂಚದ ಮೇಲೆ ಕುಳಿತು ಯೋಚಿಸುತ್ತಾ ಬಿಕ್ಕಿ ಬಿಕ್ಕಿ ಅಳುತ್ತಾ ಕುಳಿತಿದ್ದಳು. ಅವಳ ಕಣ್ಣುಗಳು ಕೆಂಪಾಗಿದ್ದುವು. ಆಗಾಗ ತನ್ನ ಕಣ್ಣು, ಕೆನ್ನೆಗಳನ್ನು ಸೀರೆ-ಸೆರಗಿನಿಂದ ಒರೆಸಿಕೊಳ್ಳುತ್ತಿದ್ದಳು. ನಾರಾಯಣನು ಬಂದು ಪಕ್ಕದಲ್ಲಿ ಕುಳಿತು, ಅವಳ ಭುಜದ ಮೇಲೆ ಕೈ ಹಾಕಿಕೊಂಡು 'ತಾಯಿಯವರು ಬೈದರೆ ಸರೂ?' ಎಂದು ಕೇಳಿದನು.

'ಇಲ್ಲ.'

'ಹಾಗಾದರೆ ಯಾಕಳುತ್ತಿರುವಿ? ಸುಮ್ಮಸುಮ್ಮನೆ ಯಾರಾದರೂ ಅಳುತ್ತಾರೆಯೇ? ಅಮ್ಮನೇ ಬೈದಿರಬೇಕು.'

'ಇಲ್ಲ. ಅವರು ನನ್ನನ್ನು ತಮ್ಮ ಮಗಳೆಂದೇ ನೋಡುವರು. ಅವರು ಬೈದರೂ ನಾನು ಮನಸ್ಸಿಗೆ ತಂದುಕೊಳ್ಳುವುದಿಲ್ಲ.'

'ಹಾಗಾದರೆ ಯಾಕೆ ಅಳುತ್ತಿರುವಿ?'

'ನಾನೇನೋ ಅದಕ್ಕೆ ಕಾರಣವನ್ನು ಹೇಳುತ್ತೇನೆ. ನೀವು ನನ್ನ ಪ್ರಶ್ನೆಗಳಿಗೆಲ್ಲಾ ಉತ್ತರ ಕೊಡಬೇಕು.'

'ನಿನ್ನಲ್ಲಿ ಮರೆಮಾಚುವೆನೆ ಸರೂ? ಏನು ಬೇಕಾದರೂ ಕೇಳು, ಹೇಳುತ್ತೇನೆ. ನಿನ್ನಿಷ್ಟ ಬಂದುದನ್ನು ಕೇಳು, ಕೊಡುತ್ತೇನೆ. ನನ್ನಲ್ಲಿ ಅಳು ಮಾತ್ರ ಬೇಡ. ನೀನು ಅಳುವುದನ್ನು ನೋಡಿದರೆ ನನಗೆ ಯಾವುದಾವುದೋ ನೆನಪಿಗೆ ಬಂದು, ನನಗೂ ಅಳು ಬರುವುದು!'

'ಯಾವುದಾವುದು?'

'ನನ್ನ ಹಿಂದಿನ ಕತೆ.'

'ಆ ಕತೆಯನ್ನೇ ನಾನು ಈಗ ಕೇಳಬೇಕೆಂದಿರುವುದು.'

'ಕತೆಯೇ?'

'ಹೌದು; ನಿಮಗೆ ಮೊದಲೊಂದು ಮದುವೆಯಾಗಿತ್ತಂತೆ, ಹೌದೇ?'

'ಹುಂ,' ಎಂದು ಸ್ವಲ್ಪ ಯೋಚಿಸುತ್ತಾ 'ಹೇಳಿ, ಅದೀಗ ಏತಕ್ಕೆ?' ಎಂದನು.

'ಯಾತಕ್ಕೂ ಇಲ್ಲ. ಸುಮ್ಮನೆ ಕೇಳಿದೆ. ನಿಮ್ಮ ಮೊದಲನೆಯ ಹೆಂಡತಿಯನ್ನು ಯಾಕೆ ಬಿಟ್ಟುಬಿಟ್ಟಿದ್ದು?'

'ಅವಳು ಅಪವಿತ್ರೆಯೆಂದು ತಿಳಿದಿದ್ದುದರಿಂದ' ಎಂದು ನಿಧಾನವಾಗಿ ಹೇಳಿದನು.

'ನಿಮಗೆ ಹೇಗೆ ಗೊತ್ತಾಯಿತು?'

'ಅವಳಿಗೆ ಬಂದಿದ್ದ ಮತ್ತು ಅವಳು ಬರೆದಿದ್ದ ಕಾಗದಗಳನ್ನು ನೋಡಿ ಸ್ಥಿರಪಟ್ಟುಕೊಂಡಿದ್ದೇನೆ.'

'ಅವಳು ಬರೆದ ಕಾಗದಗಳಲ್ಲೇನಿತ್ತು?'

'ಯಾರೋ ಒಬ್ಬನನ್ನು ಕೇಳಿದೆನೆಂದು ಹೇಳೆಂದು ಅಣ್ಣನಿಗೆ ಕಾಗದ ಬರೆದಿದ್ದಳು. ಕುಲಸ್ತ್ರೀಯಾದವಳಿಗೆ ಪರಪುರುಷನ ವಿಷಯವೇಕೆ?'

'ಚಿಕ್ಕಂದಿನಿಂದಲೂ ಸ್ನೇಹಿತನಾಗಿರಬಹುದು. ಸ್ನೇಹವು ಸಾಯುವ ತನಕ ಇರುವುದು. ಗಂಡಸಾದರೇನು, ಹೆಂಗಸಾದರೇನು, ಮೈತ್ರಿಯ ಪ್ರೀತಿಗೆ?'

ನಾರಾಯಣನು ಏನೂ ಉತ್ತರ ಕೊಡದೆ ಸುಮ್ಮನಾದನು. ಸರೋಜ 'ಅವಳಿಗೇನು ಕಾಗದ ಬಂದಿತ್ತು?' ಎಂದು ಕೇಳಿದಳು.

'ಅವಳು ಒಬ್ಬ ಸ್ನೇಹಿತನನ್ನು ಕೇಳಿದ್ದಳಲ್ಲ, ಆ ಸ್ನೇಹಿತನೇ ಕಾಗದ ಬರೆದಿದ್ದನು. ಅದರಲ್ಲಿ 'ನೀನು ಶುಕ್ರವಾರ ಸಾಯಂಕಾಲ ನನಗಿತ್ತ ದರ್ಶನ ಲಾಭಕ್ಕಾಗಿ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ' ಎಂದಿತ್ತು.

'ಅದು ಅವನ ಸ್ವಂತ ಬರವಣಿಗೆಯೇ ಎಂಬುದನ್ನು ಚೆನ್ನಾಗಿ ಬಲ್ಲಿರಾ?'

'ಅವನ ಬರವಣಿಗೆಯಂತೆಯೇ ಇದೆ.'

'ಆ ಕಾಗದವೀಗ ನಿಮ್ಮಲ್ಲಿದೆಯೇ?'

'ಹುಂ ತರುವೆನು ' ಎಂದು ಹೇಳಿ, ಪೆಟ್ಟಿಗೆಯನ್ನು ತೆಗೆದು, ಒಂದು ಡೈರಿಯಲ್ಲಿದ್ದ ಆ ಕಾಗದವನ್ನು ತೆಗೆದು ಸರೋಜಳ ಕೈಗೆ ಕೊಟ್ಟನು. ಸರೋಜ ಅದನ್ನು ಐದಾರು ಸಲ ಓದಿ ಬಹಳ ಯೋಚಿಸಿ, 'ಅತ್ತೆಯವರೇ ಅವಳನ್ನು ಆರಿಸಿ ತಂದು ನಿಮಗೆ ಮದುವೆ ಮಾಡಿದರಾ? ' ಎಂದು ಮುಖ ನೋಡಿ ಕೇಳಿದಳು.

' ಇಲ್ಲ, ಅಮ್ಮನಿಗೂ ಅವಳಿಗೂ ಮಾತು-ಕತೆಗಳೇ ಸರಿಯಾಗಿರಲಿಲ್ಲ. ತಂದೆಗೆ ಹತ್ತಿರದ ಬಾಂಧವ್ಯವಾದುದರಿಂದಲೂ, ನನ್ನ ಮನ ಮೆಚ್ಚಿದುದ ರಿಂದಲೂ ಅವಳನ್ನು ತಂದೆಯವರು ಮದುವೆ ಮಾಡಿದರು. ಅಮ್ಮ ತನ್ನ ಅಣ್ಣನ ಮಗಳು—ಆ ಕಾಳಿ—ಅವಳನ್ನು ವರಿಸೆಂದು ಹಲವು ಬಾರಿ ಹೇಳಿ ದಳು. ನಾನು ಒಪ್ಪಲಿಲ್ಲ '

' ಆ ಕಾಗದವನ್ನು ನೋಡಿದರೆ ನಿಮ್ಮ ಮಾವನ ಮಗನ ಅಕ್ಷರ ದಂತಿದೆ ' ಎಂದು ಮೆಲ್ಲನೆ ಸರೋಜ ಹೇಳಿದಳು.

' ನಿನ್ನ ಮಾತಿಗೆ ನಾನು ಒಪ್ಪಲಾರೆ ಸರೂ! ನನ್ನ ಮಾವನ ಮಗನೇಕೆ ಹೀಗೆ ಬರೆಯಬೇಕು? '

' ನಾನು ಹೇಳಬಲ್ಲೆ. ಆದರೆ..'

' ಹೇಳು ಸರೂ! ನನ್ನಲ್ಲಿ ಮರೆಮಾಚಬೇಡ. ಬೇಕಾದರೆ ' ನಾನೆ ' ಎಂದು ಹೇಳು. ನಾನು ಯಾರ ಸಂಗಡಲೂ ಹೇಳುವುದಿಲ್ಲ. ನಿನಗೆ ಭಯ ವೇನೂ ಬೇಡ. '

' ಅತ್ತೆಯವರು ಬರೆಸಿರಬಹುದು. ' ಎಂದು ನಿಧಾನವಾಗಿ ಹೇಳಿ, ಅವನ ಮಾವನ ಮಗ ಬರೆದಿದ್ದ ಒಂದು ಕಾಗದವನ್ನೂ, ತಾನು ಓದಿದ ಕಾಗದವನ್ನೂ ಗಂಡನ ಕೈಗೆ ಕೊಟ್ಟಳು ನಾರಾಯಣನು ಎರಡನ್ನೂ ಹೋಲಿಸಿ ನೋಡಿ, 'ಈಗ ಒಪ್ಪಿದೆ ಸರೂ! ಕಮಲೆ ಈಗ ಎಷ್ಟು ವ್ಯಥೆ ಪಡುತ್ತಿದ್ದಾಳೋ! ಅದೆಲ್ಲ ಇರಲಿ, ಆ ವಿಚಾರ ನಿನ್ನ ಮನಸ್ಸಿಗೇಕೆ ಬಂದಿತು?' ಎಂದು ಸ್ವಲ್ಪ ಸಂತೋಷದಿಂದ ಕೂಡಿದ ಗದ್ಗದ ಸ್ವರದಿಂದ ಕೇಳಿದನು.

" ಯಾವಾಗಲೋ ಲಕ್ಷ್ಮೀ ಮನೆಗೆ ಹೋಗಿದ್ದೆ. ಒಳಗಡೆ ಯಾರೋ 'ಆ ಸರೋಜ ಬಂದು ಕಮಲೆ ಹೆಸರನ್ನೇ ನಾರಾಯಣನಿಂದ ಮರೆಸಿಬಿಟ್ಟಳು. ಆ ಮಾಯಗಾತಿಯಾದ ಅತ್ತೆಗೆ ಸರಿಯಾದ ಸೊಸೆಯೇ ಸಿಕ್ಕಿರುವಳು ! '

ಎಂದುಕೊಂಡರು. ಇನ್ನೂ ಅನೇಕ ಕಡೆಗಳಿಂದ ಇದೇ ತರದ ಮಾತುಗಳನ್ನು ಕೇಳಿ, 'ನಾನೇ ಆ ಕಮಲೆಯಾಗಿರುತ್ತಿದ್ದರೆ ಹೇಗಿರುತ್ತಿದ್ದೆ ? ನಾನು ಬದುಕಿರುತ್ತಿರಲಿಲ್ಲ—ಸಾಯುತ್ತಿದ್ದೆ. ಆಮೇಲೆ ಪಾಪ ಯಾರ ಕೊರಳಿಗೆ ಸುತ್ತುವುದು ? ನಿಮಗೆ, ಅತ್ತೆಯವರಿಗೆ ಮತ್ತು ನಿಮ್ಮನ್ನು ಸೇರಿದ ಎರಡನೇ ಹೆಂಡತಿಗೆ' ಎಂದು ಯೋಚಿಸಿದೆ."

'ಆಮೇಲೆ ?'

'ದೇವರ ಧರ್ಮಕ್ಕೆ ಕಮಲೆ ಇನ್ನೂ ಬದುಕಿದ್ದಾಳೆ. ಅವಳನ್ನೂ ಅವಳ ಮಗುವನ್ನೂ ಮನೆಯಲ್ಲಿಟ್ಟುಕೊಂಡರೆ, ನನ್ನನ್ನೂ, ನಿಮ್ಮೆಲ್ಲರನ್ನೂ ಎಲ್ಲಾ ಹೊಗಳುವರು ಎಂದುಕೊಂಡೆ.'

'ಹೀಗೆಲ್ಲಾದರೂ ಸಾಧ್ಯವೇ ?'

'ಸಾಧ್ಯ. ನನ್ನ ಅಕ್ಕನೆಂದು ಅವಳನ್ನು ಪೂಜೆ ಮಾಡುವೆನು. ಎಲ್ಲರೂ ಅವಳು ಬಲು ಬುದ್ಧಿವಂತೆ, ಚತುರೆ, ವಿದ್ಯಾವಂತೆ, ರೂಪವಂತೆ ಎನ್ನುವರು.'

'ಹೌದು, ಎಲ್ಲಾ ಗುಣಗಳೂ ಅವಳಲ್ಲಿವೆ, ಸರೂ ! ಇಷ್ಟು ಅನರ್ಥಗಳನ್ನೂ ಮಾಡಿದಳು—ಅವಳು—ಆ ತಾಯಿ. ಬೈಯಬಾರದು..ನಾನೂ ಸದಾ ಇದೇ ವಿಚಾರವಾದ ಯೋಚನೆ ಮಾಡುತ್ತಿದ್ದೆ. ಅನೇಕ ವೇಳೆ ನೀನೇ 'ಏನು ಬಹಳ ಯೋಚನೆ ಮಾಡುತ್ತಿರುವಿರಿ ? ನನ್ನನ್ನು ಕಂಡರೆ ಪ್ರೀತಿ ಇಲ್ಲವೋ ?' ಎಂದು ಕೇಳಲಿಲ್ಲವೇ ? ಅವಳನ್ನು ಒಮ್ಮೆ ನೆನೆದರೆ ನನಗೆ ಈ ಪ್ರಪಂಚದ ನೆನಪೇ ಬರುವುದಿಲ್ಲ. ಅವಳ ಸರಸ ಸೂಕ್ತವಾದ ಮಾತೋ, ಅವಳ ವೀಣಾನಾದವೋ, ಕಂಠವೋ, ಅವಳ ನಗುವಿನ ನೋಟವೋ ಇನ್ನು ಯಾರಲ್ಲೂ ಇಲ್ಲ ಸರೂ ! ಅಂತಹವಳಲ್ಲಿ ದೋಷವನ್ನು ಆರೋಪಿಸಿ, ನನಗೆ ಕೃತಕ ಕಾಗದಗಳನ್ನು ತೋರಿಸಿ ಹೀಗೆ ಮಾಡಿದಳು, ನಮ್ಮ ತಾಯಿ.... ಅವಳು ತಾಯಿಯಲ್ಲ ಸರೂ—ಮಾರಿ ! ಬೇಕಾದರೆ ಎದುರಿಗೇ ಹೇಳುತ್ತೇನೆ. ನಮ್ಮ ಮಾವನ ಹೆಂಡತಿ ಮೊನ್ನೆ ಕಮಲೆಯ ಮನೆಗೆ ಹೋಗಿದ್ದಳಂತೆ; ಮಗುವನ್ನು ನೋಡಿದ್ದಳಂತೆ. ಬೆಳ್ಳಿಯ ವಿಗ್ರಹವೆಂದು ಹೇಳಿ, 'ಮಗು, ನಾಣಿಯೇ ! ಕಮಲೆ ಬಲು ಕೃಶವಾಗಿ ಹೋಗಿದ್ದಾಳೆ. ಇನ್ನು ಎರಡು ತಿಂಗಳಿದ್ದರೆ ಹೆಚ್ಚು' ಎಂದು ಹೇಳಿದಳು. ಅವಳಾಗುವ ವೇಳೆಗೆ ಇಷ್ಟು

ಮಾತ್ರವಾದರೂ ಬಂದ ದುಃಖವನ್ನೆಲ್ಲಾ ಅನುಭವಿಸಿಕೊಂಡಿದ್ದಾಳೆ.' ಎಂದು ಕಣ್ಣೀರು ಸುರಿಸುತ್ತಾ ಹೇಳಿದನು.

'ನೀವು ಮದುವೆಯಾದ ಹಿಂದಿನ ವರುಷ ಮಹಾರಾಣೀ ಹೈಸ್ಕೂಲಿನಲ್ಲಿ ಹುಡಿಗೆಯರು ಆಡಿದ 'ಶಾಕುಂತಲ' ನಾಟಕದಲ್ಲಿ ಶಕುಂತಲೆಯ ಪಾರ್ಟನ್ನು ಮಾಡಿದ್ದಳಲ್ಲಾ ಆ ಕಮಲೆಯೇನೆ?'

'ಹೌದು, ಆ ಶಕುಂತಲೆಯೇ! ಶಕುಂತಲೆಯ ಗತಿಯೇ ಅವಳಿಗೆ ಬಂದಿದೆ. ಆದರೆ ಮುಂದೆ ನಾನು ಅವಳನ್ನು ಸೇರುವೆನೋ ಇಲ್ಲವೋ! ಅದೇ ನನಗೆ ಅನುಮಾನ.'

"ಶಕುಂತಲೆಯ ಪಾರ್ಟನ್ನು ಆ ದಿನ ಬಲು ಚೆನ್ನಾಗಿ ಮಾಡಿದಳು. ನಮ್ಮ ಹೆಡ್ಮಿಸ್ಟ್ರೆಸ್ಸು ಬಹಳ ಸಂತೋಷಪಟ್ಟು ಅವಳಿಗೆ ಚಿನ್ನದ ಪದಕ ಕೊಟ್ಟು, 'ನನ್ನ ತಮ್ಮ ರಾಜು ಬಿ. ಎ. ನಲ್ಲಿ ಓದುತ್ತಿದ್ದಾನೆ. ಅವನನ್ನು ಮದುವೆಯಾಗುತ್ತೀಯಾ?' ಎಂದು ನಗುತ್ತಾ ಕೇಳಿದಳು."

'ಆಗ ಕಮಲೆ ಏನು ಹೇಳಿದಳು?'

"ಆ ಕಪ್ಪಗಿರೋನ್ನೆ ಮ್ಯಾಡಮ್? ನನ್ನ ಗಂಡ ದುಷ್ಯಂತನಂತಿರಬೇಕು.' ಎಂದು ನಗುತ್ತಾ ಉತ್ತರ ಕೊಟ್ಟಳು. ಬಲು ಚೆನ್ನಾಗಿ ಹಾಡುತ್ತಿದ್ದಳು. ಮ್ಯಾಡಮ್ ಅವಳಿಂದ ಅನೇಕ ತಡವೆ ಹಾಡಿಸಿ, ಅವಳಿಗೆ ತಿಂಡಿ ಕೊಡುತ್ತಿದ್ದರು. ಸ್ಕೂಲಿನಲ್ಲಿ ಎಲ್ಲರಿಗೂ ಅವಳನ್ನು ಕಂಡರೆ ಬಲು ಪ್ರೀತಿ."

'ದುಷ್ಯಂತನೇ ಸಿಕ್ಕಿದ್ದೇನೆ. ಅವಳು ನಿನಗೆ ಗುರುತೇ, ಸರೂ?' ಎಂದು ನಿಟ್ಟುಸಿರು ಬಿಟ್ಟು ಕೇಳಿದನು.

'ಹುಂ. ಅವಳ ಸ್ನೇಹವನ್ನು ಸಂಪಾದಿಸಲು ಬಲು ಕಷ್ಟಪಟ್ಟೆ. ಒಂದು ದಿನ ನಾನೇ ಹೋಗಿ ಮಾತನಾಡಿಸಿ ಸ್ನೇಹ ಬೆಳೆಸಿದೆ. ರತ್ನದಂತಹ ಹುಡುಗಿ!'

'ಅದೆಲ್ಲಾ ಏಕೆ? ಬಿಡು.' ಎಂದು ನಾರಾಯಣನು ಹೇಳಿದನು.

'ಹೋಗಿ ಕರತಂದು ಮನೆಯೊಳಗೆ ಇಟ್ಟುಕೊಳ್ಳೋಕೆ. ಸ್ಕೂಲಿನಲ್ಲಿ ನಾವಿಬ್ಬರೂ ಅಕ್ಕತಂಗಿಯರಂತಿದ್ದೆವು. ಇನ್ನುಮೇಲೆಯೂ ಹಾಗೇ ಇರುತ್ತೇವೆ.'

'ಅವಳಿಗೆ ಈಗ ಮುಖವನ್ನು ಹೇಗೆ ತೋರಿಸಲಿ, ಸರೂ?'

'ಬನ್ನಿ, ಇಬ್ಬರೂ ಹೋಗೋಣ. ನಾನು ಮೊದಲು ಹೋಗಿ ಮಾತ ನಾಡಿಸುತ್ತೇನೆ ಆಮೇಲೆ ನೀವು ಬನ್ನಿ.'

'ಆಗಲಿ ಸರೂ, ನಾಳೆ ಸಾಯಂಕಾಲ ಹೋಗೋಣ.'

'ನಾಳೆ-ಗೀಳೆ ಅನ್ನಬೇಡಿ. ಅತ್ತೆಯವರ ಹತ್ತಿರ ಹೋಗಿ ನಾಟಕಕ್ಕೆ ಹೋಗುತ್ತೇವೆಂದು ಹೇಳಿ ಬನ್ನಿ. ಇಬ್ಬರೂ ಟ್ಯಾಕ್ಸಿಯಲ್ಲಿ ನಂಜನಗೂಡಿಗೆ ಕಮಲೆಯ ಹತ್ತಿರಕ್ಕೆ ಹೋಗೋಣ'

'ಆಗಲಿ' ಎಂದು ಹೇಳಿದನು.

ನಾರಾಯಣನೂ, ಸರೋಜಳೂ ಟ್ಯಾಕ್ಸಿಯಿಂದ ಸ್ವಲ್ಪ ದೂರದಲ್ಲಿಯೇ ಇಳಿದು ಕಮಲೆಯ ಮನೆಯ ಹತ್ತಿರಕ್ಕೆ ಬಂದರು ಹೊರಗಡೆಯಿದ್ದ ಕೊಟಡಿಯಲ್ಲಿ ಕಮಲೆಯು ಕುಳಿತಿದ್ದಳು. ಅವಳ ಮುಂದುಗಡೆ ಅವಳ ಒಂದು ವರ್ಷದ ಎಳೆಗೂಸು ಅಂಬೆಗಾಲಿಡುತ್ತಾ, ತೊದಲು ಮಾತ ನಾಡುತ್ತಾ, ತಾಯಿಯ ತೊಡೆಯ ಮೇಲೆ ಹಾದು ತನ್ನ ಕೈಗಳನ್ನು ಆಗಾಗ ಅವಳ ಮೇಲೆ ಹಾಕುತ್ತಾ, 'ಅಮ್ಮಾ, ಅಮ್ಮಾ' ಎಂದು ಕೂಗುತ್ತಾ ಇತ್ತು. ಅವಳ ಕೈಯಲೊಂದು ಗಾಜಿನ ಪಾತ್ರೆ. ಅದರಲ್ಲಿ ಹಚ್ಚನೆಯ ನೀರು! ಶುಕ್ಲಪಕ್ಷದ ಚತುರ್ದಶಿಯ ಚಂದ್ರನ ಕಿರಣವು ಕಿಟಕಿಯಿಂದ ಕೊಟಡಿಯಲ್ಲಿನ ಕಮಲೆಯ ಮತ್ತು ಅವಳ ಮಗುವಿನ ಮೇಲೆ ಬೀಳು ತ್ತಿತ್ತು ಕಮಲೆಯ ಕೈಯಲ್ಲಿದ್ದ ಗಾಜಿನ ಪಾತ್ರೆಯು ಆ ಕಿರಣಗಳ ಸಂಪರ್ಕ ದಿಂದ ಮಿಣುಗುತ್ತಿತ್ತು. ರಾಮರಾಯನೂ ಅವನ ಹೆಂಡತಿಯೂ ಸಿನಿ ಮಾಕ್ಕೆ ಕಮಲೆಯನ್ನು ಮನೆಯಲ್ಲಿ ಬಿಟ್ಟು ಹೋಗಿದ್ದರು.

ತೊಡೆಯ ಮೇಲಿದ್ದ ಮಗುವನ್ನು, ಕಮಲೆ ಕೈಯ್ಯಲ್ಲಿ ಎತ್ತಿಕೊಂಡು ಮುತ್ತಿಟ್ಟು ಅದರ ಕೆಂಗುರುಳುಗಳನ್ನು ಕೈಯಿಂದ ಸವರಿ, 'ಕಂದಾ! ನಿನ್ನನ್ನು ನೋಡಿಕೊಂಡೇ ಇಷ್ಟು ದಿನಗಳಿಂದಲೂ ಬಂದ ಕಷ್ಟಗಳನ್ನೆಲ್ಲಾ ಸಹಿಸಿಕೊಂಡಿದ್ದೆ. ಇನ್ನು ಮುಂದೆ ನಿನ್ನನ್ನು ದೇವರು ನೋಡಿಕೊಳ್ಳಬೇಕು ಮಗು! ನಿನ್ನೆ—ಅವಳಿದ್ದಾಳಲ್ಲ—ಅವಳು, ಹೀನಾವಮಾನವಾಗಿ ಬೈದಳು. ಈ ಹಾಳು ಮನೆಯಲ್ಲಿ ಎಷ್ಟು ಕೆಲಸ ಮಾಡಿದರೂ ಅವಳಿಂದ ದಿನವೂ ಬೈಗಳ ಕೇಳಬೇಕು. ತಾಯಿಯಿರುವಲ್ಲಿ ನನ್ನನ್ನು ಎಲ್ಲರೂ ಚೆನ್ನಾಗಿ ನೋಡಿಕೊಳ್ಳು ತ್ತಿದ್ದರು. ಆಗ ರಾಮುವೂ ತಂಗಿ ಎಂದು ಪ್ರೀತಿ ಇಟ್ಟಿದ್ದನು. ನಿನ್ನೆ ಹೆಂಡತಿಯ

ಮಾತನ್ನು ಕೇಳಿ ನನ್ನನ್ನು ಹೊಡೆದು, ' ಎಲ್ಲಾದರೂ ತೊಲಗಿ ಹೋಗು ! ' ಎಂದು ಅವನೂ ಬೈದನು. ನನ್ನ ಕಂದಾ ! ನಿನ್ನೇನೇ ಸಾಯಬೇಕಾಗಿತ್ತು. ನಿನ್ನ ನೋಡಿದಾಗಲೆಲ್ಲಾ ನಿನಗಾಗಿಯಾದರೂ ಇರೋಣ ಅನ್ನಿಸುತ್ತದೆ. ನಾನಿನ್ನು ಇದ್ದೇನು ಪ್ರಯೋಜನ ? ನಿನ್ನನ್ನು ಇನ್ನು ಮುಂದೆ ಯಾರು ಸಾಕುವರಮ್ಮಾ ! ನಿನಗೂ ನನ್ನ ಗತಿಯೇ ಬರುತ್ತದೆಯೋ ಏನೋ ! ಮಾವ ನೋಡಿಕೊಳ್ಳುವನೇ ? ನಾನಿರುವಲ್ಲಿಯೇ ನೋಡದವನು ನಾನು ಸತ್ತ ಮೇಲೆ ನೋಡುವನೇ ? ನಿಮ್ಮ ತಂದೆ. . ಅಯ್ಯೋ ! ಅವರನ್ನಾದರೂ ಸೇರ ಬಿಲ್ಲೆಯಾ ? ಹೇಗೆ ಸೇರುವೆ ? ನಾನೇ ಭಿಕ್ಷುಕಳಂತೆ ಅವರ ಮನೆಗೆ ಹೋಗಿ ನಿನ್ನನ್ನು ಕೊಡಲೇ ? ಅಯ್ಯೋ. . ' ನೀನು ಯಾರು ಹೊರಡು ! ' ಎಂದು ಗದರಿಸಿದರೆ ಏನು ಮಾಡಲಿ ? ಅವಳೊಬ್ಬಳಿದ್ದಾಳಲ್ಲ ! ಸಾಲದ್ದಕ್ಕೆ ಅವರ ಎರಡನೇ ಹೆಂಡತಿ ಬೇರೆ ಬಂದಿದ್ದಾಳಂತೆ !

' ಎಲ್ಲಾ ನೀನೇ ಮಾಡಿದವನು, ದೇವಾ. . . . ನಿನಗೆ ಕಣ್ಣಿಲ್ಲವೇ ? ಅನಾಥರಕ್ಷಕನೆನ್ನುತ್ತಾರಲ್ಲ ! . . . . ಅನಾಥರಕ್ಷಕನೇ ? ಅಲ್ಲ. . . . ಅನಾಥ ಶಿಕ್ಷಕ ! . . ನಾನು ಹುಟ್ಟಿದಾಗ ಹೇಗಿದ್ದೆ ? ಶಾಲೆಯಲ್ಲಿ. . . . ಅದೆಲ್ಲಾ ಯಾಕೆ ? ಆಮೇಲೆ ಅವರನ್ನು ಮದುವೆಯಾದೆ. . . . ಎಂಥ ಪವಿತ್ರರವರು ! ಎಲ್ಲಾ ಆ ಅತ್ತೆ ಮಾಡಿದ್ದು. . ಎಳಗೂಸಿನಂಥ ಮನುಷ್ಯರವರು ! ನನ್ನನ್ನು ಒಂದು ದಿನವೂ ಬೈದಿಲ್ಲ. ಕಂದಾ! ಒಂದು ಕಾಗದ ಬರೆದಿಟ್ಟಿದ್ದೇನೆ. ಅದನ್ನು ನಿಮ್ಮ ಮಾವ. . . . ನಿನ್ನನ್ನು ಅವರಲ್ಲಿ ಬಿಟ್ಟು ಈ ಕಾಗದ ಕೊಟ್ಟರೆ. . . . ಅವರ ಮನಸ್ಸು ಕರಗಿ ನಿನ್ನನ್ನು ಸಾಕಬಹುದು. . . . . .

' ಇಲ್ಲ. ಆ ಮಾವ ಇಷ್ಟು ಕೆಲಸ ಮಾಡುವನೇ ? . . ಈ ದಿನ ಅವಳು ನನ್ನನ್ನು ' ನೀನು ಸೂಳೆ, ಅದಕ್ಕೇ ನಿನ್ನ ಗಂಡ ಬಿಟ್ಟುಬಿಟ್ಟಿರುವುದು. ಇಲ್ಲಿ ಹೇಗೆ ತಿನ್ನುತ್ತಿದ್ದೀ ? ' ಎಂದು ಹೇಳುತ್ತಿದ್ದರೆ, ನನ್ನನ್ನೇ ಬೈದು ಹೊಡೆದ ನಲ್ಲ ! ಅವನು ಅಣ್ಣನೇ? . . ಅಯ್ಯೋ! ಕೈ ಹಿಡಿದವರೇ ಬಿಟ್ಟ ಮೇಲೆ ಯಾರು ರಕ್ಷಿಸುವರು ? . . ಈ ದಿನ ಸತ್ಯವಾಗಿಯೂ ನಾನಿರಲಾರೆ ? . . ಎಲ್ಲಿ ಹೋಗಲಿ ? ನನಗಾರಿದ್ದಾರೆ ? . . ಯಾರೂ ಇಲ್ಲ. ಯಾಕೆ ?.. ಇದ್ದಾರೆ. ಯಮ, ನೀನೊಬ್ಬ ನಿದ್ದೀಯೆ! . . ಧರ್ಮಾ ! ನಿನ್ನನ್ನು ಧರ್ಮನೆನ್ನುತ್ತಾರಲ್ಲವೇ ? ನೀನು ಅನಾಥ ರಕ್ಷಕನೋ, ಶಿಕ್ಷಕನೋ ? ಇಲ್ಲ. . ಇಲ್ಲ. ನೀನು ಅನಾಥರಕ್ಷಕ ! ದೇವಾ

ನೀನು ಸಲಹು. ಇಗೊ ನಿನ್ನ ಮರೆಹೊಕ್ಕಿದ್ದೇನೆ..ಕಂದಾ! ಇದು ನನ್ನ ಕಡೆಯ ಮುತ್ತು..' ಎಂದು ಅಳುತ್ತಾ ಮಗುವನ್ನು ಮುದ್ದಿಸಿ, ಗಾಜಿನ ಪಾತ್ರೆಯನ್ನು ಕೈಗೆ ತೆಗೆದುಕೊಂಡಳು.

'ನೋಡಿದಿರಾ ಕಮಲೆಯನ್ನು! ಸದ್ಗುಣ ವಿಮಲೆಯನ್ನು!! ಪತಿವ್ರತಾ ಶಿರೋಮಣಿಯನ್ನು!!! ಇಂಥಾ ಕಷ್ಟಕಾಲದಲ್ಲಿಯೂ ನಿಮ್ಮನ್ನು ಹೊಗಳುತ್ತಿದ್ದಾಳಲ್ಲ! ಎಂಥ ಕಲ್ಲೆದೆ ಗಂಡಸರದು! ಹೋಗಿ ಮಾತನಾಡಿಸಿ' ಎಂದು ಸರೋಜ ನಾರಾಯಣನಿಗೆ ಹೇಳಿದಳು.

'ನೀನು ಹೋಗಿ ಮೊದಲು ಮಾತನಾಡಿಸು ಸರೂ, ನಾನು ಬರುತ್ತೇನೆ' ಎಂದು ನಾರಾಯಣನು ತಲೆ ಬಗ್ಗಿಸಿಕೊಂಡು ಹೇಳಿದನು.

ಸರೋಜ ಕಮಲೆಯ ಮುಂದೆ ಬಂದು ನಿಂತು 'ಅಕ್ಕಾ!' ಎಂದಳು. ಕಮಲೆ ತಲೆಯನ್ನು ಮೇಲಕ್ಕೆತ್ತಿದಳು ಕೂಸು ತೊಡೆಯ ಮೇಲಿದ್ದಿತು. 'ನೀನು ಯಾರು ತಾಯಿ? ಎಲ್ಲೋ ನೋಡಿದಂತೆ ನೆನಪಿದೆ. ನನ್ನಲ್ಲಿ ಏನು ಕೆಲಸವಿದೆಯಮ್ಮ?' ಎಂದು ಕೇಳಿದಳು

'ನಿನ್ನ ಸಾಲೆಯ ಸ್ನೇಹಿತೆ ಅಕ್ಕಾ. ನಿನ್ನಲ್ಲೊಂದು ಭಿಕ್ಷೆ ಬೇಡಲು ಬಂದಿದ್ದೇನೆ.'

'ನನ್ನಲ್ಲಿ ಏನಿದೆ ತಾಯಿ? ನಾನೊಬ್ಬ ಅನಾಥೆ, ಸ್ವತಂತ್ರೆಯೇ? ಇಲ್ಲ. ನಾನು ಏನನ್ನು ಕೊಡಲೂ ಹಕ್ಕಿಲ್ಲ ನನ್ನ ಪ್ರಾಣ ಒಂದನ್ನು ಬೇಕಾದರೆ ಕೊಡಬಲ್ಲೆ. ಮಗುವನ್ನು ಕೊಡಬಲ್ಲೆ. ಅಷ್ಟೆ ತಾಯಿ! ಏನು ಬೇಕು?' ಎಂದು ಕಣ್ಣಿನಲ್ಲಿ ನೀರು ಸುರಿಸಿದಳು.

'ನಾನು ಹೇಳಿದ ಹಾಗೆ ಕೇಳಬೇಕು?'

'ನೀನು ಯಾರು ತಾಯಿ?'

'ನಿನ್ನನ್ನು ಈ ಗತಿಯಲ್ಲಿಟ್ಟ ಪಾಪಿ—ನಿನ್ನ ಸವತಿ! ಅಕ್ಕಾ—ನಿನ್ನ ಹೆಸರಿನವಳೇ, ಸರೋಜ.' ಎಂದು ಅಳುತ್ತಾ ಹೇಳಿ, ಕಮಲೆಯ ಕೈಯಲ್ಲಿದ್ದ ಪಾತ್ರೆಯನ್ನು ಕಿತ್ತುಕೊಳ್ಳಲು ಹೋದಳು. ಆಗಲಿಲ್ಲ. ಕಮಲೆಯು ಅದರಲ್ಲಿದ್ದುದನ್ನು ಕುಡಿದೇ ಬಿಟ್ಟಳು. 'ಅಯ್ಯೋ!' ಎಂದು ಸರೋಜ ಕೂಗಿಕೊಂಡಳು. ನಾರಾಯಣನು ಓಡಿ ಬಂದು, 'ಕಮಲಾ!' ಎಂದು ಕಣ್ಣಿನಲ್ಲಿ ನೀರು ಸುರಿಸಿದನು.

' ಈಗಲಾದರೂ ಬಂದಿರಾ! ಬನ್ನಿ, ನನ್ನ ಕಡೆಯ ಕೋರಿಕೆಯನ್ನು ಸಲ್ಲಿಸಿ, ಬನ್ನಿ ' ಎಂದು ಧೈರ್ಯದಿಂದ ಹೇಳಿದಳು.

' ಅಯ್ಯೋ! ಎಂಥಾ ಹಾಳು ಕೆಲಸ ಮಾಡಿದೆ, ಕಮಲು? ' ಎಂದು ದುಃಖದಿಂದ ಹೇಳುತ್ತಾ ಅವಳ ತಲೆಯ ಹತ್ತಿರ ಕುಳಿತು ಅವಳ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು, ಅವಳ ಮುಖವನ್ನು ಒರೆಸಿದನು. ಅವನ ಎಳೆಗೂಸನ್ನು ಸರೋಜ ಎತ್ತಿಕೊಂಡು ಅವಳ ಪಕ್ಕದಲ್ಲಿ ನಿಂತಳು.

' ಕಮಲು, ಎಂಥಾ ಅನರ್ಥ ಮಾಡಿಬಿಟ್ಟೆ! '

' ಏನೂ ಅನರ್ಥವಿಲ್ಲ. ಸರಿಯಾದ ಹೊತ್ತಿಗೇನೇ ಸರಿಯಾದ ಕೆಲಸವನ್ನು ಮಾಡಿದೆ. ನನ್ನ ಪಾಡಂತೂ ಸರಿ ಹೋಯಿತು. ಈ ಕೂಸು..ನನ್ನದಲ್ಲ! ದೇವರದು..ನಿಮ್ಮದು. ಅದನ್ನು ಮುಂದಕ್ಕೆ ತನ್ನಿ ಸರೋಜ! ಬಾ ತಾಯಿ..ಕುಳಿತುಕೋ..ನೀನು ನನ್ನನ್ನು ಬಹಳ ಪ್ರೀತಿಸುತ್ತಿದ್ದೆ. ಆ ಪ್ರಿತಿಯನ್ನು ಈ ತಬ್ಬಲಿ ಕೂಸಿನ ಮೇಲೆ ತೋರಿಸು..ತಾಯಿ..ನಿನ್ನ ಮಗುವಿದವ್ಮಾ....ದಿಕ್ಕಿಲ್ಲದ್ದು ಕಾಪಾಡು......'

' ಕಮಲಾ! ನಾನು ಎಂತೆಂಥ ಅನರ್ಥಗಳನ್ನು ಮಾಡಿದೆ? '

' ನೀವೇನೂ ಮಾಡಲಿಲ್ಲ. ಎಲ್ಲಾ ನಿಮ್ಮ ತಾಯಿ ಮಾಡಿದ್ದು. ನನ್ನ ಹಣೆಯಲ್ಲಿ ಹೀಗಾಗಬೇಕೆಂದು ಬರೆದಿತ್ತು..ಆಯಿತು..ನಿಮ್ಮದು ತಪ್ಪಿಲ್ಲ. ನಾನು ಪವಿತ್ರೆ ಎಂದು ನಿಮ್ಮ ಮನಸ್ಸು ಒಪ್ಪಿದರೆ ಸಾಕು....'

' ನೀನು ಪತಿವ್ರತೆ ಕಮಲು. ಪತಿಪರಾಯಣೆ. ನಿನಗೆ ಕೊಟ್ಟ ಕಷ್ಟ ನನ್ನನ್ನು ಎಂದಾದರೂ ಪೀಡಿಸುತ್ತೆ. '

' ನಿಮ್ಮ ಮುಖವನ್ನು ನೋಡಿದರೇನೇ ತಿಳಿಯುತ್ತೆ. ನನಗಾಗಿ ಎಷ್ಟೋ ನೊಂದಿರುವಿರಿ. ಅದೇ ನಿಮಗೆ ದೇವರು ಕೊಟ್ಟಿರುವ ಶಿಕ್ಷೆ. ಮರೆಯದಿರಿ. ಮಗುವನ್ನು ನೋಡಿಕೊಳ್ಳಿ..ಸರೋಜ, ನನ್ನ ಮಾತು ನೆನಪಿರಲಿ ತಾಯಿ. ಕೂ..ಸ..ನ್ನು ಕೈ....ಬಿ....ಡ....ಬೇ....ಡಿ..! ' ಎಂದು ಹೇಳಿ ಗಂಡನ ತೊಡೆಯ ಮೇಲೆ ಕಣ್ಣು ಮುಚ್ಚಿಕೊಂಡಳು!

—

# ವಿಷಮಶೀತಜ್ವರ

೧

ಮಿಷನ್ ಆಸ್ಪತ್ರೆಯ ಮುಂದೆ ಜಟಕಾ ಗಾಡಿಯು ನಿಂತಿತು. ಡಾಕ್ಟರುಗಳು ಮತ್ತು ನರ್ಸುಗಳು ಭಾನುವಾರದ ಉಡಿಗೆ-ತೊಡಿಗೆಗಳಿಂದ ಅಲಂಕೃತರಾಗಿ ಆಸ್ಪತ್ರೆಯ ಹೆಬ್ಬಾಗಿಲಲ್ಲಿ, ರೋಗಿಗಳನ್ನೊಮ್ಮೆ ನೋಡಿ ಬರಲು ಹೋಗಿದ್ದ ದೊಡ್ಡ ಡಾಕ್ಟರೂ ತಮ್ಮೊಡನೆ ಬರುವುದಕ್ಕಾಗಿ ಕಾದಿದ್ದರು. ಆ ಭಾನುವಾರದ ಬೆಳಗ್ಗೆ ಮದರಾಸಿನಿಂದ ಬಂದಿದ್ದ ಬಿಷಪ್ಪರ ವಿಶೇಷ ದೇವತಾರಾಧನೆಯು ಚರ್ಚಿನಲ್ಲಿದ್ದಿತು. ಪ್ರತಿಯೊಬ್ಬರೂ ತಮ್ಮ ಕೈ-ಗಡಿಯಾರಗಳ ಕಡೆ ನೋಡಿಕೊಳ್ಳುತ್ತಾ, 'ಇನ್ನೂ ಏಕೆ ದೊಡ್ಡ ಡಾಕ್ಟರು ಬರಲಿಲ್ಲ?' ಎಂದು ಕಾತರರಾಗಿದ್ದರು. ನಿಂತ ಜಟಕಾ ಗಾಡಿಯಿಂದ ಲಾಯರ್ ಚಕ್ರಪಾಣಿ ಇಳಿದು, ಜೇಬಿನಿಂದ ಲಕ್ಕೋಟೆಯೊಂದನ್ನು ತೆಗೆದು ಕೈಯಲ್ಲಿ ಹಿಡಿದು, 'ದೊಡ್ಡ ಡಾಕ್ಟರು ಇದ್ದಾರೆಯೇ?' ಎಂದು ಕೇಳಿದನು.

'ರೋಗಿಗಳನ್ನು ಪರೀಕ್ಷಿಸುತ್ತಿದ್ದಾರೆ. ಈಗ ಅವರೂ ಚರ್ಚಿಗೆ ಹೋಗಲು ಹೊತ್ತಾಯಿತು. ಇಂದು ಮದರಾಸಿನಿಂದ ಬಂದಿರುವ ಬಿಷಪ್ಪರ ವಿಶೇಷ ದೇವತಾರಾಧನೆ ಚರ್ಚಿನಲ್ಲಿದೆ. ಹನ್ನೊಂದು ಗಂಟೆ ಮೇಲೆ ಬನ್ನಿ.' ಎಂದು ಚಿಕ್ಕ ಡಾಕ್ಟರೊಬ್ಬಳು ಹೇಳಿದಳು.

ಲಾಯರ್ ಚಕ್ರಪಾಣಿಗೆ ಆ ಮಾತನ್ನು ಕೇಳಿ ಬಹಳ ರೇಗಿಹೋಯಿತು. ಮೊದಲೇ ಬಡಿದುಕೊಳ್ಳುತ್ತಿದ್ದ ಆತನ ಎದೆ ಇನ್ನೂ ಜೋರಾಗಿ ಬಡಿದುಕೊಳ್ಳಲು ಆರಂಭವಾಯಿತು. ಮುಖವೆಲ್ಲಾ ದುಗುಡ ಕಾತರಗಳಿಂದ ಉಂಟಾದ ಬೆವರು-ಹನಿಗಳಿಂದ ತುಂಬಿದುವು. ಮುಖವನ್ನು ಕೂಡ ಒರಸಿಕೊಳ್ಳಲು ಮನ ಹೋಗದೆ, ಆತ, 'ನಿಮ್ಮನ್ನು ಅದೆಲ್ಲಾ ನಾನು ಕೇಳಲಿಲ್ಲ.

ದೊಡ್ಡ ಡಾಕ್ಟರಿದ್ದರೆ ಅವರನ್ನು ಸ್ವಲ್ಪ ಬೇಗ ಕರೆಯಿರಿ. ಬಹು ಕಾಯಿಲೆಯಿಂದಿರುವ ರೋಗಿಯನ್ನು ಕರೆತಂದಿದ್ದೇನೆ.' ಎಂದನು

'ಈಗ ಯಾರನ್ನು ನೋಡಲೂ ಅವರಿಗೆ ಬಿಡುವಿಲ್ಲರಿ. ಹನ್ನೊಂದು ಗಂಟೆಗೆ ಬನ್ನಿ. ನಿಮಗೋಸ್ಕರ ಭಾನುವಾರ—ಅದೂ ವಿಶೇಷ ದೇವತಾರಾಧನೆ ಇರುವಲ್ಲಿ—ಇಲ್ಲಿ ನಿಂತು ನಿಮ್ಮ ರೋಗಿಯನ್ನು ನೋಡುವುದೇ ಅಲ್ಲ ನಮ್ಮ ಕೆಲಸ' ಎಂದು ಮೊದಲು ಹೇಳಿದ ಡಾಕ್ಟರ ಗೆಳತಿ ನರ್ಸೊಬ್ಬಳು ಹೇಳಿದಳು

'ಈ ಆಸ್ಪತ್ರೆಯು ನಮಗಲ್ಲದೆ ಮತ್ಯಾರಿಗಿರಿ? ಗೊತ್ತಿಲ್ಲವೇ ನಿನಗೆ, ಜನರ ಸೇವೆ ಜನಾರ್ದನನ ಸೇವೆಗಿಂತ ಹೆಚ್ಚೆಂದು?' ಎಂದು ಕೋಪದಿಂದ ಚಕ್ರಪಾಣಿ ಹೇಳಿದನು

'ನಾವು ನಿಮ್ಮ ಜನಾರ್ದನನ ಭಕ್ತರಲ್ಲರಿ!' ಎಂದು ಡಾಕ್ಟರ್ ನಕ್ಕು ಹೇಳಿದಳು.

'ಎಲ್ಲರ ಜನಾರ್ದನನೂ ಒಬ್ಬನೇ. ಕ್ರಿಸ್ತದೇವನು ಕೂಡ ಜನಕ್ಕಾಗಿಯೇ ತನ್ನ ಇಹಲೋಕದ ದೇಹವನ್ನು ತೆತ್ತ. ಆತ ಕೂಡ ತನ್ನ ತಂದೆಯ ದೇವಸಾನ್ನಿಧ್ಯಕ್ಕಿಂತಲೂ ಮಾನವರ ಉದ್ಧಾರ ಹೆಚ್ಚೆಂದು ಭೂಮಿಯಲ್ಲಿ ಅವತರಿಸಿದ ತತ್ವ ತಿಳಿಯದೆ, ಭಕ್ತಿಯಿಲ್ಲದೆ, ಬಟ್ಟೆ ಹಾಕಿಕೊಂಡು ಎಷ್ಟು ದೇವಾಲಯಗಳಿಗೆ ಹೋದರೆ ತಾನೆ ಏನು!' ಎಂದು ಚಕ್ರಪಾಣಿ ಕಣ್ಣುಗಳಿಂದ ಕಿಡಿ ತೂರುತ್ತಾ, ತಾನು ಮಾತನಾಡುತ್ತಿರುವುದು ಹೆಂಗಸರೊಡನೆಂಬುದನ್ನೂ ಮರೆತು, ಸರಿಯಾದ ಗೌರವದ ಅಮೃತಮಯವಾದ ನಯವಾದ ಮಾತನಾಡದೆ ಒರಟಾಗಿ ಒದರಿದನು.

ಈತನ ಘರ್ಜನೆಯನ್ನು ಕೇಳಿದ, ಪಕ್ಕದ ಕೊಟಡಿಯಲ್ಲಿ ರೋಗಿಯನ್ನು ಪರೀಕ್ಷಿಸುತ್ತಿದ್ದ, ದೊಡ್ಡ ಡಾಕ್ಟರು ಹೆಬ್ಬಾಗಿಲ ಬಳಿಗೆ ಬಂದು, 'ಏನು ಸಮಾಚಾರ?' ಎಂದು ನಸುನಗೆಯಿಂದ ಕೇಳಿದಳು.

ಆಕೆ ಬಂದೊಡನೆಯೇ ನರ್ಸು ಡಾಕ್ಟರುಗಳೆಲ್ಲಾ ಪಕ್ಕಕ್ಕೆ ಸರಿದು ನಡುವೆ ದಾರಿಯನ್ನು ಬಿಟ್ಟರು. ಆಕೆಯೂ ಆಗ ಚರ್ಚಿಗೆ ಹೋಗಲು ಅರ್ಧಡಿ ಜರತಾರಿಯಂಚುಳ್ಳ ಬಿಳಿಯ ರೇಷ್ಮೆಯ ಸೀರೆ ಜಾಕೇಟುಗಳಿಂದ

ಅಲಂಕೃತಳಾಗಿದ್ದಳು. ಅವಳ ಕುರುಳು ಸೀರೆ ಜಾಕೇಟುಗಳಿಗುಪಯೋಗಿಸಿದ್ದ ಜರತಾರಿಯಿಂದಲೇ ಮಾಡಲ್ಪಟ್ಟಿದ್ದ ರಿಬ್ಬನಿನಿಂದ ಬಿಗಿಯಲ್ಪಟ್ಟಿತ್ತು. ಆಕೆಯ ಬಿಳಿಯ ಬಣ್ಣವೂ ಆ ಉಡಿಗೆಯೂ, ಹಣೆಯಲ್ಲಿ ವಿಭೂತಿ ಕುಂಕುಮಗಳಿದ್ದಿದರೆ, ಪಾರ್ವತಿ ಎಂದು ಆಕೆಯನ್ನು ಹೇಳಬಹುದಾಗಿದ್ದಿತು. ರೋಗಿಗಳನ್ನು ಪರೀಕ್ಷಿಸುತ್ತಿದ್ದ 'ಸ್ಟೆತಸ್ಕೋಪ್' ಇನ್ನೂ ಆಕೆಯ ಕತ್ತಿನಲ್ಲಿಯೇ ಇದ್ದಿತು.

ಬಹು ಕಾತರತೆ ಕೋಪಗಳಿಂದಿದ್ದ ಚಕ್ರಪಾಣಿಯ ಕೈಕಾಲುಗಳು ನಡುಗುತ್ತಿದ್ದುವು. ನಡುಗುವ ಕೈಯಿಂದಲೇ ಕಾಗದವನ್ನು ಆಕೆಗೆ ಕೊಟ್ಟನು. ಆಕೆ ಅದನ್ನು ಓದಿ, 'ಹನ್ನೆರಡು ದಿನಗಳಿಂದಲೂ ಡಾಕ್ಟರ್ ರಾಮರಾಯರು ನೋಡುತ್ತಿದ್ದರಾ?' ಎಂದು ಕೇಳಿದಳು.

'ಹೌದು ಡಾಕ್ಟರ್.'

'ಇಲ್ಲೇ ಇನ್ ಪೇಷಂಟಾಗಿ ಸೇರಿಸ ಹೇಳಿದ್ದಾರೇ?'

'ಹೌದು ಡಾಕ್ಟರ್. ರೋಗಿಯನ್ನು ಮನೆಯಲ್ಲಿ ನೋಡಿಕೊಳ್ಳುವವರು ಯಾರೂ ಇಲ್ಲ. ಇಲ್ಲಿ ಹೊಸದಾಗಿ ಆತ ಕೆಲಸಕ್ಕೆ ಬಂದು ಕಾಯಿಲೆ ಬಿದ್ದಿದ್ದಾನೆ ನಾನು ನೋಡಿಕೊಳ್ಳೋಣವೆಂದರೆ ಮನೆಯಲ್ಲಿ ನಮ್ಮಾಕೆ, ನನ್ನ ಮಗ ಇಬ್ಬರಿಗೂ ಎಂಟು ದಿನಗಳಿಂದ ಮಲೇರಿಯಾ. ಡಾಕ್ಟರ್ ರಾಮರಾಯರೇ ಅವರಿಗೆ ಇಂಜಕ್ಷನ್ ಔಷಧ ಎಲ್ಲಾ ಕೊಡುತ್ತಿದ್ದಾರೆ. ಅವರು ಈ ಸ್ಥಿತಿ ಎಲ್ಲಾ ನೋಡಿ 'ಮಾಧವರಾವಿಗೆ ವಿಷಮಶೀತಜ್ವರ. ಔಷಧಕ್ಕಿಂತಲೂ ಹೆಚ್ಚಾಗಿ 'ನರ್ಸಿಂಗ್' ಬೇಕು. ಮಿಷನ್ ಆಸ್ಪತ್ರೆಗೆ ಸೇರಿಸು. ಅಲ್ಲಿ ನರ್ಸಿಂಗ್ ಬಹಳ ಚೆನ್ನಾಗಿದೆ. ಅಲ್ಲಿನ ದೊಡ್ಡ ಡಾಕ್ಟರಿಗೆ ಕಾಗದ ಬರೆದು ಕೊಡುತ್ತೇನೆ' ಎಂದು ಹೇಳಿ, ಈ ಕಾಗದ ಕೊಟ್ಟರು. ರೋಗಿಯನ್ನೂ ಕರೆತಂದಿದ್ದೇನೆ.'

'ಡಾಕ್ಟರ್ ರಾಮರಾವ ಬಹಳ ಒಳ್ಳೇ ಡಾಕ್ಟರು. ವೃತ್ತಿಗಾಗಿ ಕೆಲಸ ಮಾಡುವ ಅಂತಹ ಮೇಧಾವಿಗಳನ್ನು ನಾನು ಇದುವರೆಗೂ ನೋಡಿಲ್ಲ!' ಎಂದು ಹೇಳಿ, 'ಫ್ರಾಂಕಲಿನ್!' ಎಂದು ಕೂಗಿದಳು.

ವಾರ್ಡ್ ಬಾಯ್ ಫ್ರಾಂಕಲಿನ್ ಬಂದು ನಿಂತನು.

'ಐಜಾಕನನ್ನು ಕರೆದು, ನೀನೂ ಅವನೂ ಸ್ಟ್ರೆಚರಿನಲ್ಲಿ, ಗಾಡಿಯಲ್ಲಿ

ಇರುವ ರೋಗಿಯನ್ನು ಹುಷಾರಾಗಿ ತೆಗೆದುಕೊಂಡು ಹೋಗಿ ಹನ್ನೊಂದನೆ ನಂಬರ್ ರೂಮಿನಲ್ಲಿ ಬಿಡಿ.'

'ಜಾರ್ಜ್ ಫರ್ನಾಂಡೀಸ್ ಸಾಹೇಬರ ರೂಮಿನ ಪಕ್ಕದ ರೂಮಿನ ಲ್ಲೇನಮ್ಮಾ?'

'ಹೌದು.' ಎಂದು ಹೇಳಿ, 'ನೀವೆಲ್ಲಾ ಚರ್ಚಿಗೆ ಹೋಗಿರಿ. 'ಆ್ಯಂಬುಲೆನ್ಸ' ಕಾರು ಇಲ್ಲೇ ಇರಲಿ. ರೋಗಿಯನ್ನು ಪರೀಕ್ಷಿಸಿ ಆರಾಧನೆಯ ವೇಳೆಗೆ ಕಾರಿನಲ್ಲಿ ಬಂದುಬಿಡುತ್ತೇನೆ' ಎಂದಳು.

'ಅವರೆಲ್ಲಾ ಡಾಕ್ಟರಿಗೆ ವಂದಿಸಿ ಮರುಮಾತನಾಡದೆ ಚರ್ಚಿಗೆ ಹೊರಡಲುದ್ಯುಕ್ತರಾದರು. ಆಗ ಡಾಕ್ಟರು 'ಇಂದಿರಾ!' ಎಂದು ಅವರೊಡನಿದ್ದ ನರ್ಸನ್ನು ಕರೆದು, 'ಹೋಗಿ ಸ್ವಲ್ಪ 'ವ್ಹೇ' ಮತ್ತು ಕಿತ್ತಳೆ ಹಣ್ಣಿನ ರಸ ಮಾಡಿಕೊಂಡು ಬಾ' ಎಂದು ಹೇಳಿ, ಸ್ಟ್ರೆಚರಿನಲ್ಲಿ ಸಾಗಿಸಲ್ಪಟ್ಟ ರೋಗಿಯೊಡನೆ ಕೊಟಡಿಗೆ ತಾನೂ ಚಕ್ರಪಾಣಿಯೊಡನೆ ಬಂದಳು.

ರೋಗಿಯನ್ನು ಕೊಟಡಿಯಲ್ಲಿನ ಮಂಚದ ಮೇಲಿನ ಹಾಸಿಗೆಯ ಮೇಲೆ ಮಲಗಿಸಿದರು. ಡಾಕ್ಟರು ರೋಗಿಯನ್ನು ಚೆನ್ನಾಗಿ ಪರೀಕ್ಷಿಸಿ, ಆಶ್ಚರ್ಯದಿಂದ ಉಷ್ಣಾಂಶವನ್ನು ನೋಡುತ್ತಾ 'ಎಷ್ಟು ದಿನಗಳಿಂದ ಜ್ವರ ಹೀಗಿದೆ?' ಎಂದು ಚಕ್ರಪಾಣಿಯನ್ನು ಕೇಳಿದಳು.

'ಹೋದ ಭಾನುವಾರದಿಂದಲೂ ಹೀಗಯೇ ಹೆಚ್ಚಾಗಿದೆ, ಡಾಕ್ಟರ್. ಸ್ವಲ್ಪವೂ ಟೆಂಪರೇಚರ್ ಇಳಿದೇ ಇಲ್ಲ. ರಾತ್ರಿಯಾದರೆ ನೂರಾ ನಾಲ್ಕು, ನೂರೈದು ಆಗುತ್ತೆ. ಬಹಳ ರಕ್ತಹೀನವಾಗಿ ಹೋಗಿದ್ದಾನೆ ರೋಗಿ!'

'ಹೌದು. ಈಗ ಸಾವಿರ ಸಿ. ಸಿ. ನಾರ್ಮಲ್ ಸಲೈನ್ ಇಂಜಕ್ಷನ್ ಕೊಡುತ್ತೇನೆ. ಹಾರ್ಟ್ ಎಲ್ಲಾ ಸರಿಯಾಗಿದೆ. ನೀವು ಭಯ ಏನೂ ಪಡಬೇಕಾಗಿಲ್ಲ. ರೋಗಿ ಏನಾಗಬೇಕು ನಿಮಗೆ ಮಿಸ್ಟರ್ ಚಕ್ರಪಾಣಿ?'

'ನನ್ನ ಬಾಲ್ಯದ ಗೆಳೆಯ. ಎಂ. ಎ. ನಲ್ಲಿ ಸಹಪಾಠಿ.'

'ವಾರ್ಡಿಗೆ ದಿನಕ್ಕೆ ಎರಡು ರೂಪಾಯಿ ಆಗುತ್ತೆ. ಜೊತೆಗೆ ಔಷಧಕ್ಕೆ ಆಗುವ ಖರ್ಚೆಲ್ಲಾ ಕೊಡಬೇಕು. ನಾವೇನೋ ಕ್ರಿಸ್ತ ದೇವನ ಸೇವಕರಾಗಿ ಸೇವೆ ಮಾಡುತ್ತೇವೆ. ಅದಕ್ಕೇ ಅಮೇರಿಕಾದಿಂದ ಇಲ್ಲಿಗೆ ಬಂದಿದ್ದೇವೆ.'

' ಆಗೋ ಖರ್ಚು ಕೊಡದಿದ್ದರೆ ಆಗುತ್ತದೆಯೋ ಡಾಕ್ಟರ್ ? '

ರೋಗಿಯು ತನ್ನ ದೃಷ್ಟಿಯನ್ನು ಗೋಡೆಯ ಕಡೆಯಿಂದ ಡಾಕ್ಟರ ಕಡೆ ಹೊರಳಿಸಿದ.

ನರ್ಸ್ ಇಂದಿರೆ ' ವ್ಹೇ ' ಮತ್ತು ಕಿತ್ತಳೆ ಹಣ್ಣಿನ ರಸವನ್ನು ಎರಡು ಗಾಜಿನ ಲೋಟಗಳಲ್ಲಿ ತಂದು, ಕೊಟಡಿಯಲ್ಲಿದ್ದ ರೋಗಿಯ ಔಷಧಿ ಮೊದಲಾದ ಸಾಮಾನುಗಳನ್ನಿಡಲು ಇದ್ದ ಮೇಜಿನಂತಿದ್ದ ಅಲಮ್ಯಾರಿನ ಮೇಲೆ ಇಟ್ಟಳು.

' ಇಂದಿರಾ! ಸ್ಟೋರ್ಸಿಗೆ ಹೋಗಿ ಸಾವಿರ ಸಿ ಸಿ. ನಾರ್ಮಲ್ ಸೆಲೈನ್ ಟ್ಯೂಬ್ ಮತ್ತು ಸ್ಟರಲೈಜ್ ಮಾಡಿಕೊಂಡು ಸಿರೆಂಜ್ ತೆಗೆದುಕೊಂಡು ಬಾ ' ಎಂದು ಡಾಕ್ಟರ್ ಹೇಳಿದಳು.

ಇಂದಿರೆ ಹೋಗಿ, ಡಾಕ್ಟರು ಹೇಳಿದ ವಸ್ತುಗಳೊಡನೆ ಬಂದಳು. ಡಾಕ್ಟರ್ ರೋಗಿಯ ತೊಡೆಯಲ್ಲಿ ಸಿರಂಜಿನ ದಬ್ಬಣದಂತಿದ್ದ ಸೂಜಿಯನ್ನು ಚುಚ್ಚಿ ಸಾವಿರ ಸಿ. ಸಿ ಯನ್ನೂ ಕೊಟ್ಟು ಆದ ಗಾಯಕ್ಕೆ ಪ್ಲಾಸ್ಟರನ್ನು ಹಾಕಿ, ' ಇಂದಿರಾ ! ಕಾಲು ಗಂಟೆಯಾದ ಮೇಲೆ ' ವ್ಹೇ ' ಕೊಟ್ಟು, ಹತ್ತು ಗಂಟೆಗೆ ಕಿತ್ತಳೆ ಹಣ್ಣಿನ ರಸ ಕೊಡು. ನಾನು ಚರ್ಚಿಗೆ ಹೋಗಿ ಬರುತ್ತೇನೆ. ಪೇಷಂಟಿನ ಕಾರ್ಡನ್ನು ಬರೆದಿಡು. ' ಎಂದು ಹೇಳಿ, ' ನರ್ಸ್ ಇಂದಿರೆ ಎಲ್ಲಾ ನೋಡಿಕೊಳ್ಳುತ್ತಾಳೆ ಆಕ ಫಸ್ಟಕ್ಲಾಸ್ ನರ್ಸ್. ಅನೇಕ ಡಾಕ್ಟರುಗಳಿಗಿಂತಲೂ ಮೇಲು. ನಾನು ಬರಲಾ ?' ಎಂದು ನಸುನಗೆಯಿಂದ ಚಕ್ರಪಾಣಿ ಮತ್ತು ರೋಗಿಗೆ ಹೇಳಿದಳು. ಆಕೆಯ ನಸುನಗೆಯೇ ಸಾಧಾರಣವಾಗಿ ರೋಗಿಗಳ ಅರ್ಧ ರೋಗವನ್ನು ಗುಣಪಡಿಸುತ್ತಿದ್ದಿತು.

' ಬಹಳ ಥ್ಯಾಂಕ್ಸ್ ಡಾಕ್ಟರ್ ! ' ಎಂದು ಚಕ್ರಪಾಣಿ ದೈನ್ಯದೃಷ್ಟಿಯನ್ನು ಡಾಕ್ಟರ್ ಮೇಲೆ ಬೀರಿದನು.

' ಇದಕ್ಕಿಂತಲೂ ಹೆಚ್ಚಿನ ಕೆಲಸ ಪ್ರಪಂಚದಲ್ಲಿ ಇನ್ನೇನಿದೆ ? ' ಎಂದು ಹೇಳಿ, ಆಕೆ ಬೇಗ ಬೇಗ ಹೆಜ್ಜೆಯಿಟ್ಟು ಹೊರಟಳು.

ನರ್ಸ್ ಇಂದಿರೆ ಒಂದು ಪುಸ್ತಕವನ್ನು ತಂದು, ಅದರಲ್ಲಿ ಬರೆಯಬೇಕಾಗಿದ್ದ ಪ್ರತಿ ಅಂಶವನ್ನೂ ಬರೆಯಲು ಚಕ್ರಪಾಣಿಯನ್ನು ಪ್ರಶ್ನಿಸಿದಳು. ಚಕ್ರಪಾಣಿ ಕೊಟ್ಟ ಉತ್ತರಗಳನ್ನು ಪುಸ್ತಕದಲ್ಲಿ ಬರೆದುಕೊಂಡಳು.

'ರೋಗಿಯ ಹೆಸರು?' ಎಂದು ಇಂದಿರೆ ಕೇಳಿದಳು.

'ಆರ್ ಮಾಧವರಾವ್.'

'ಜಾತಿ?'

'ಬ್ರಾಹ್ಮಣ.'

'ಬ್ರಾಹ್ಮಣ!'

'ಹೌದು.'

'ಮದುವೆಯಾಗಿದೆಯಾ ಅಥವಾ ಒಬ್ಬರೇನಾ?'

'ಒಬ್ಬರೇ.'

'ತಂದೆ ತಾಯಿ ಬಂಧು ಬಳಗ?'

'ಯಾರೂ ಇಲ್ಲ. ಹತ್ತಿರದ ಗೆಳೆಯ ನಾನೊಬ್ಬನೇ.' ಎಂದು ರೋಗಿಯ ಕಡೆ ಚಕ್ರಪಾಣಿ ನೋಡಿದನು. ರೋಗಿಯು ತನ್ನ ಬಿಳಿಚಿಕೊಂಡ, ಜ್ವರದ ಬೇಗೆಯಿಂದ ಸುಡುತ್ತಿರುವ, ಮುಖದಿಂದ ನಸುನಗೆಯ ಕಣವೊಂದನ್ನು ಚದರಿಸಿದನು.

'ನಿಮ್ಮ ಹೆಸರು ಲಾಯರ್ ಮಿಸ್ಟರ್ ಚಕ್ರಪಾಣಿ?'

'ಹೌದು'

'ಪೂರ್ಣ ವಿಳಾಸ?'

'ಎಂ. ಎ; ಬಿ. ಎಲ್., ೨೪೩, ಎಕ್ಸ್ಟೆನ್‌ಷನ್.'

'ಗೇಟಿನ ಕಮಾನಿಗೆ ನಾಗಮಲ್ಲಿಗೆ ಬಳ್ಳಿ ಹಬ್ಬಿಸಿರುವ ಮನೆಯಾ?'

'ಹೌದು!'

'ಮಿಸ್ಟರ್ ಮಾಧವರಾಯರ ಕೆಲಸ?'

'ರೆವಿನ್ಯೂ ಪ್ರೊಬೇಶನರ್.'

'ಸಂಬಳ?'

'ತಿಂಗಳಿಗೆ ಎಂಭತ್ತು ರೂಪಾಯಿ.'

ನರ್ಸ ಇಂದಿರೆ ಪುಸ್ತಕದಲ್ಲಿ ಎಲ್ಲವನ್ನೂ ಬರೆದು ಮುಗಿಸಿದ ಮೇಲೆ ರುಜುವಿಗೆ ಪುಸ್ತಕವನ್ನು ಚಕ್ರಪಾಣಿಯ ಮುಂದಿಟ್ಟಳು. ಆತ ಅದಕ್ಕೆ ರುಜು ಹಾಕಿ, 'ನರ್ಸ! ರೋಗಿಯನ್ನು ನೀವು ಸ್ವಲ್ಪ ವಿಶ್ವಾಸದಿಂದ ನೋಡಿಕೊಳ್ಳಬೇಕು. ನಾನು ಇಲ್ಲೀ ಇರುತ್ತಿದ್ದೆ. ನನ್ನ ಮನೆಯ ಕಷ್ಟವನ್ನು

ಎಲ್ಲಾ ಹೇಳಿದ್ದೇನೆ. ಎಷ್ಟು ಹಣ ಬೇಕಾದರೂ ಪರವಾ ಇಲ್ಲ. ರೋಗಿನ್ನ ಹುಷಾರಾಗಿ ನೋಡಿಕೊಳ್ಳಿ. ಸರಿಯಾದ ಬಹುಮಾನ ಖಂಡಿತ ನಿಮಗೆ ಬರುತ್ತೆ.'

'ನಾನು ಕೇಳಿದ ಬಹುಮಾನ ಕೊಡಿಸುತ್ತೀರಾ?' ಎಂದು ಇಂದಿರೆ ನಸುನಗೆಯಿಂದ ರೋಗಿಯನ್ನು ನೋಡುತ್ತಾ ಚಕ್ರಪಾಣಿಯನ್ನು ಕೇಳಿದಳು.

'ಏನು ಬೇಕಾದರೂ ಕೊಡುತ್ತೇವೆ. ಅಲ್ಲವೇ ಮಾಧು?' ಎಂದು ಚಕ್ರಪಾಣಿ ಮಾಧವರಾಯನ ಕಡೆ ನೋಡಿ ಹೇಳಿದನು.

ಮಾಧವರಾವ್ ಕಣ್ಣಿನ ನೋಟದಿಂದಲೇ ತನ್ನ ಗೆಳೆಯನ ಮಾತಿಗೆ ಸಮ್ಮತಿಸಿದನು.

ಇಂದಿರೆ ರೋಗಿಗಳಿಗಿರುವ ಕಾರ್ಡನೊಂದನ್ನು ತೆಗೆದುಕೊಂಡು, ಅದರಲ್ಲೂ ರೋಗಿಯ ಹೆಸರು, ರೋಗ, ಆತನ ಆಗಿನ ಸ್ಥಿತಿಯನ್ನು ಗುರ್ತಿಸಿ 'ನ್ಹೋ'ಯಿದ್ದ ಗ್ಲಾಸನ್ನು ತೆಗೆದುಕೊಂಡು, ಸ್ವಲ್ಪ ಸ್ವಲ್ಪವಾಗಿ ಅದನ್ನು ರೋಗಿಗೆ ಕುಡಿಸಿದಳು. ಆಗ ಪಕ್ಕದ ಕೊಟಡಿಯಿಂದ 'ಇಂದಿರಾ! ನರ್ಸ ಇಂದರಾ!' ಎನ್ನುವ ಕರೆ ಬಂದಿತು.

'ನರ್ಸ! ಯಾರಿದ್ದಾರೆ ಪಕ್ಕದ ಕೊಟಡಿಯಲ್ಲಿ?' ಎಂದು ಚಕ್ರಪಾಣಿ ಕೇಳಿದನು.

'ಡಾಕ್ಟರ್ ಜಾರ್ಜ ಫರ್ನಾಂಡಿಸ್.'

'ಡಾಕ್ಟರ್!'

'ಹೌದು; ಅಮೇರಿಕಾದ ಡಿ. ಡಿ.'

'ಕ್ರೈಸ್ತ ಧರ್ಮಪಾರಂಗತ?'

'ಹೌದು.'

'ಕರೆದವರು?'

'ಆತನ ಗಾ:ಡ್ ಮದರ್. ಅಮೇರಿಕಾದ ಲಕ್ಷಾಧೀಶ್ವರಿ. ಗಂಡ ತೀರಿ ಹೋದ ಮೇಲೆ ಇಲ್ಲೇ ನೆಲೆಸಿದ್ದಾಳೆ. ಆತ ಆಕೆಯ ಸಾಕುಮಗ. ಜೀವ

ಸರ್ವಸ್ವ! ಆಕೆಯೇ ಆತನನ್ನು ಅಮೇರಿಕಾದಲ್ಲಿ ತನ್ನ ಮನೆಯಲ್ಲಿಟ್ಟುಕೊಂಡೇ ಡಿ. ಡಿ. ಪಾಸು ಮಾಡಿಸಿದಳು ಈಗ ಇಬ್ಬರೂ ಮತೋದ್ಧಾರ ಮಾಡಲು ಭಾರತಕ್ಕೆ ಬಂದಿದ್ದಾರೆ.

'ಈತ ಹೇಗೆ ಗುರುತಾದ ಆಕೆಗೆ?'

'ಈ ಆಸ್ಪತ್ರೆಯಲ್ಲಿ ಬೆಳೆದಾತ. ಬ್ಯಾಪ್ಟೈಸ್ ಆಗೋವಲ್ಲ ಆಗಿನ ಡಾಕ್ಟರ್, ತನ್ನ ಅಮೇರಿಕಾದ ಐಶ್ವರ್ಯದಿಂದ ಕೂಡಿದ ಮಕ್ಕಳು ಮರಿ ಯಾರೂ ಇಲ್ಲದ, ಗೆಳತಿಯನ್ನು ಸಾಕುತಾಯಿಯಾಗಿ ಮಾಡಿ, ಆ ಮನೆತನದ ಹೆಸರನ್ನೇ ಆತನಿಗಿಟ್ಟಳು. ಅವರೇ ಆತನನ್ನು ಮೊದಲು ಹಣ ಕೊಟ್ಟು ಇಲ್ಲಿ ಓದಿಸಿ, ಆಮೇಲೆ ಅಮೆರಿಕಾದಲ್ಲಿ ಓದಿಸಿ ಮುಂದಕ್ಕೆ ತಂದರು. ಮುಂದೆ ಆತ ದೊಡ್ಡ ಬಿಷಪ್!'

'ಹೋ!' ಎಂದು ಚಕ್ರಪಾಣಿ ಹೇಳಿ, 'ಈಗ ಆತನಿಗೆ ಹೇಗಿದೆ?' ಎಂದು ಕೇಳಿದನು.

'ಆತನಿಗೆ ಟೈಫಾಯಿಡ್ ಬಂದು ಇಂದಿಗೆ ಇಪ್ಪತ್ತೈದು ದಿನ ಆಯ್ತು ಮೊನ್ನೆಯಿಂದ ಜ್ವರವಿಲ್ಲ.'

'ಹಾಗಾದರೆ ಇದು ವಿಷಮಶೀತಜ್ವರದ ವಾರ್ಡ್?'

'ಹೌದು.'

'ಆಕೆ ಚರ್ಚಿಗೆ ಹೋಗಲಿಲ್ಲ?'

'ಸಂಜೆಯ ಸರ್ವಿಸ್ಸಿಗೆ ಹೋಗುತ್ತಾಳೆ. ನಾನು ರೋಗಿಯನ್ನು ನೋಡಿ ಬರುತ್ತೇನೆ. ಆಸ್ಪತ್ರೆಯಲ್ಲಿ ಈಗ ಒಳ್ಳೆಯ ಕಿತ್ತಳೆ ಹಣ್ಣು ಸಿಕ್ಕೋದಿಲ್ಲ. ನಾನು ತಂದಿರುವುದು ನಾಲ್ಕು ಹಣ್ಣುಗಳ ರಸ ನೋಡಿ! ಸಿಕ್ಕಿದರೆ ಸಂಜೆ ಒಳ್ಳೆ ಕಿತ್ತಳೆ ಹಣ್ಣು ತಂದು ರೋಗಿಗೆ ಕೊಡಿ.'

'ಆಗಲಿ.'

ಇಂದಿರೆ ಕರೆ ಬಂದ ಪಕ್ಕದ ಕೊಟಡಿಗೆ ಹೋಗುವ ಮೊದಲು ರೋಗಿಗೆ ಹೊದಿಕೆ ಹೊದ್ದಿಸಿ, ಕಿತ್ತಳೆ ಹಣ್ಣಿನ ರಸವಿದ್ದ ಗಾಜಿನ ಲೋಟವನ್ನು ಅಲಮ್ಯಾರಿನಲ್ಲಿಟ್ಟು ಅದಕ್ಕೆ ಕಾಗದವೊಂದನ್ನು ಮುಚ್ಚಿ, ಹೋದಳು

—

೨

'ಇಂದಿರಾ! ಏಕಮ್ಮ ಇಷ್ಟು ಹೊತ್ತು?' ಎಂದು ಮಿಸೆಸ್ ಫರ್ನಾಂಡಿಸ್ ಕೇಳಿದಳು.

'ಪಕ್ಕದ ರೂಮಿನಲ್ಲಿ ಪೇಷೆಂಟ್ ಒಬ್ಬರನ್ನು ಸೇರಿಸಬೇಕಾಗಿತ್ತು. ಡಾಕ್ಟರ್ ಬ್ರೈಟ್‌ಲೈಟ್ ಕೂಡ ಇಷ್ಟು ಹೊತ್ತೂ ಅಲ್ಲೇ ಇದ್ದರು.'

'ಏನು ಟೈಫಾಯಿಡ್ಡಾ?'

'ಹೌದು.'

'ನೋಡು ಇಂದಿರಾ! ಜಾರ್ಜ್ ಇನ್ನೂ ಆರೆಂಜ್ ಜೂಸ್ ತೆಗೆದುಕೊಂಡಿಲ್ಲ. ಅದನ್ನು ಅವನಿಗೆ ನೀನೇ ಕೊಡಬೇಕಂತೆ!'

ಇಂದಿರೆ ನಕ್ಕಳು. ವಾರ್ಡ್ ಬಾಯ್ ತಂದಿಟ್ಟಿದ್ದ ಕಿತ್ತಳೆ ಹಣ್ಣಿನ ರಸವಿದ್ದ ಗಾಜಿನ ಪಾತ್ರೆಯನ್ನು ತೆಗೆದುಕೊಂಡು ರೋಗಿಗೆ ಕುಡಿಸಿದಳು

ರೋಗಿಯು 'ಥ್ಯಾಂಕ್ಸ್ ಮಿಸ್ ಇಂದಿರಾ!' ಎಂದು ಮೆಲ್ಲನೆ ನಸುನಗೆಯಿಂದ ಉಸುರಿದನು.

'ನೋಡು, ನಿನ್ನ ಕೈಯಿಂದ ಆಹಾರ ಪಾನೀಯಗಳನ್ನು ತೆಗೆದುಕೊಂಡರೆ ಅವನಿಗೆಷ್ಟು ತೃಪ್ತಿ! ಇಂದಿರಾ, ನನ್ನದೊಂದು ಪ್ರಾರ್ಥನೆ ಜಾರ್ಜ್ ಕೂಡ ಅದನ್ನೇ ಮೂರು ನಾಲ್ಕು ದಿನದಿಂದ ನನಗೆ ಹೇಳುತ್ತಿದ್ದಾನೆ. ನೀನು ಅದನ್ನು ಸಲ್ಲಿಸಿಕೊಡಬೇಕು.'

'ಏನದು ಮಿಸೆಸ್ ಫರ್ನಾಂಡಿಸ್?'

'ನನ್ನ ಆಸ್ತಿಯನ್ನೆಲ್ಲಾ ನಿಮಗೆ ಬರೆದುಕೊಡುತ್ತೇನೆ. ನೀವಿಬ್ಬರೂ ಮದುವೆಮಾಡಿಕೊಂಡಿದ್ದಾಗ ನಿಮ್ಮೊಡನಿದ್ದು ನನ್ನ ಕಡೆಗಾಲವನ್ನು ಕಳೆಯಬೇಕೆಂದೇ ಅಮೆರಿಕಾದಿಂದ ಇಲ್ಲಿಗೆ ಬಂದಿದ್ದೇನೆ. ನಿನ್ನ ಶುಶ್ರೂಷೆಯಿಂದಲೇ ಅವನಿಗೆ ವಾಸಿಯಾದದ್ದು. ಆ ದಿನವಂತೂ ನಾನೂ ಡಾಕ್ಟರ್ ಬ್ರೈಟ್‌ಲೈಟ್ ಇವನ ಆಸೆ ಬಿಟ್ಟಿದ್ದೆವು. ನಿನ್ನ ಕೈಗುಣ ಚೆನ್ನಾಗಿದೆ ಇಂದಿರಾ! ಡಾಕ್ಟರ್ ಪರೀಕ್ಷೆ ಪಾಸು ಮಾಡದಿದ್ದರೂ ಎಷ್ಟೋ ಡಾಕ್ಟರುಗಳಿಗಿಂತ ಮೇಲು. ಏನು ಚೆನ್ನಾಗಿ ಇಂಜಕ್ಷನ್ ಎಲ್ಲಾ ಕೊಡುತ್ತೀ, ಮಗಳೇ!'

ಇಂದಿರೆ ನಸುನಕ್ಕಳು.

ಆ ಕೊಟಡಿಯಲ್ಲಿಯೇ ಇದ್ದ ಮಂಚದ ಕೆಳಗಿನ ಬುಟ್ಟಿಯಿಂದ ಮುದುಕಿಯು ಆರು ಕಿತ್ತಳೆ ಹಣ್ಣನ್ನು ತೆಗೆದು ಇಂದಿರೆಗೆ ಕೊಡಹೋದಳು.

'ಬೇಡ' ಎಂದಳು ಇಂದಿರೆ.

'ನಾನು ಕೊಡುವುದೊಂದೂ ಬೇಡವಾ, ಮಗು? ನೀನು ಎಷ್ಟು ಸೇವೆ ಮಾಡಿದ್ದೀ!'

'ಆದಕ್ಕೆ ಆಸ್ಪತ್ರೆಯವರು ನನಗೆ ಸಂಬಳ ಕೊಡುತ್ತಾರೆ ನನ್ನ ಕರ್ತವ್ಯವನ್ನು ನಾನು ಮಾಡುತ್ತೇನೆ'

'ಅವರು ಕೊಡೋ ಸಂಬಳ ತಾನೇ ಎಷ್ಟು ಕಂದಾ! ತಿಂಗಳಿಗಿಪ್ಪತ್ತು ನಿನ್ನಂಥ ಫಸ್ಟ್‌ಕ್ಲಾಸಿನಲ್ಲಿ ಪಾಸು ಮಾಡಿರುವ ರಜಿಸ್ಟರ್ಡ್ ನರ್ಸಿಗೆ ನಮ್ಮ ದೇಶದಲ್ಲಿ ಇನ್ನೂರು ರೂಪಾಯಿ ಕೊಡುತ್ತಾರೆ!'

'ಆದರೆ ಇಂಡಿಯ ಅಮೇರಿಕಾ ಅಲ್ಲ.'

'ಹೌದು; ಹೌದು! ಇಲ್ಲಿನ ಜೀವನದ ಮಟ್ಟವೇ ಕಡಿಮೆ. ಅಲ್ಪ ತೃಪ್ತರು'

ಇಂದಿರೆ ಸುಮ್ಮನಿದ್ದಳು.

'ಮಗು! ನೀನು ಈ ಸಲ ತೆಗೆದುಕೊಳ್ಳಲೇಬೇಕು. ನಾನು ಕೊಡುವುದನ್ನೆಲ್ಲಾ ನನ್ನ ಮನಸ್ಸನ್ನು ನೋಯಿಸಬೇಡ. ತೆಗೆದುಕೋ' ಎಂದು ಬಲಾತ್ಕಾರದಿಂದ ಆ ಆರು ಕಿತ್ತಳೆ ಹಣ್ಣುಗಳನ್ನೂ ಒಂದು ಕರವಸ್ತ್ರದಲ್ಲಿ ಕಟ್ಟಿ, ಇಂದಿರೆಯ ಕೈಹಿಡಿದುಕೊಂಡಳು. ಇಂದಿರೆ ಯೋಚಿಸುತ್ತ ಅದನ್ನು ತೆಗೆದುಕೊಂಡು, 'ಥ್ಯಾಂಕ್ಸ್ ಮಿಸೆಸ್ ಫರ್ನಾಂಡಿಸ್!' ಎಂದು, 'ಈಗ ಹಸಿವಾಗುತ್ತಿದೆಯಾ?' ಎಂದು ಜಾರ್ಜನನ್ನು ಕೇಳಿದಳು.

'ಈ ದಿನ ಬಹಳ ಹಸಿವಾಗುತ್ತಿದೆ. ಕಾರ ಬೇಕು. ಅನ್ನ ಬೇಕು.'

'ಡಾಕ್ಟರ್ ಹೇಳುವ ವರೆಗೂ ಬೇಡಿ. ಇನ್ನೂ ಎಂಟು ದಿನ ಬೇಡಿ'

'ಈ ಹಾಳು 'ವ್ಹೇ' ಆರೆಂಜ್ ಜ್ಯೂಸ್ ಬೇಜಾರು.'

'ಹೋಗಲಿ, ನಾಳೆಯಿಂದ ನೀರು ಸೇರಿಸಿದ ಹಾಲು ಕೊಡುತ್ತೇನೆ.'

'ಹಾಗಾದರೂ ಸರಿ, ಮಿಸ್ ಇಂದಿರಾ!'

'ನಾನು ಬರಲಾ?' ಎಂದು ಇಂದಿರೆ ನಸುನಗೆಯನ್ನು ಜಾರ್ಜ್ ಮತ್ತು ಮಿಸೆಸ್ ಫರ್ನಾಂಡಿಸರ ಮೇಲೆ ಬೀರಿ, ಕೈಯಲ್ಲಿ ಕರವಸ್ತ್ರದಲ್ಲಿ ಕಟ್ಟಿದ್ದ ಕಿತ್ತಳೆ ಹಣ್ಣುಗಳನ್ನು ಹಿಡಿದುಕೊಂಡು, ಅಲ್ಲಿಂದ ಹೊರಟಳು.

---

೩

ರಾತ್ರಿ ಸುಮಾರು ಹತ್ತು ಗಂಟೆ ಮಾಧವರಾಯನು ತನ್ನಷ್ಟಕ್ಕೆ ತಾನೇ ಅಸಂಬದ್ಧಪ್ರಲಾಪಕ್ಕೆ ತೊಡಗಿದನು. ಆತನ ಮಾತಿನಲ್ಲಿ ಎಲ್ಲಾ ಲೋಕಗಳ ಮಾತುಗಳೂ ಇದ್ದುವು. ಚಕ್ರಪಾಣಿ ಆತನ ಕೈಯನ್ನು ಮುಟ್ಟಿ ನೋಡಿ, ಅಲ್ಲಿದ್ದ ಸ್ಟೂಲಿನ ಮೇಲೆ ಸ್ತಂಭೀಭೂತಳಾಗಿ ಕುಳಿತಿದ್ದ ನರ್ಸ್ ಇಂದಿರೆಗೆ, 'ಕಡಿಮೆ ಉಷ್ಣಾಂಶದ ಮನೋಭ್ರಮಣೆಯಾಗಿದೆ!' ಎಂದನು.

'ಹೌದು.'

'ದೊಡ್ಡ ಡಾಕ್ಟರನ್ನು ಕರೆಯುತ್ತೀರಾ?'

'ಅವರು ಸಂಜೆ ರೈಲಿನಲ್ಲಿ ಬಿಷಪ್ಪರೊಡನೆ ಮದರಾಸಿಗೆ ಹೊರಟು ಹೋದರು. ಇನ್ನು ಎರಡು ವಾರ ಅವರು ಬರುವುದಿಲ್ಲ.'

'ಹಾಗಾದರೆ!'

ಇಂದಿರೆ ಸುಮ್ಮನಿದ್ದಳು.

'ಚಿಕ್ಕ ಡಾಕ್ಟರನ್ನು ಕರೆಯುತ್ತೇನೆ.' ಎಂದು ಹೇಳಿ ಚಕ್ರಪಾಣಿ ಹೋದನು.

ಆಗ ಉಪದೇಶಕಳು ಬಂದಳು. ಮೊಳಕಾಲೂರಿ, 'ರೋಗಿಗೆ ವಾಸಿ ಮಾಡು ಏಸುದೇವ!' ಎಂದು ಪ್ರಾರ್ಥಿಸಿ, ತನ್ನ ಕತ್ತಿನಲ್ಲಿನ ಹಾರದಲ್ಲಿ ಧರಿಸಿದ್ದ ಶಿಲುಬೆಯನ್ನು ಔಷಧದ ಗಾಜಿನ ಬಟ್ಟಲಿಗೆ ಸೋಕಿಸಿ, 'ಇಂದಿರಾ! ಇದನ್ನು ರೋಗಿಗೆ ಕೊಡು. ಕ್ರಿಸ್ತದೇವನು ಈತನ ರೋಗವನ್ನು ವಾಸಿ ಮಾಡುತ್ತಾನೆ.' ಎಂದಳು.

ಇಂದಿರೆ ಔಷಧವನ್ನು ರೋಗಿಗೆ ಕುಡಿಸಿದಳು.

ಚಕ್ರಪಾಣಿ ಒಂದು ನಿಟ್ಟುಸಿರು ಬಿಟ್ಟನು. 'ಏನು ಸಮಾಚಾರ?' ಎಂದು ಉಪದೇಶಕಳು ಕೇಳಿದಳು.

'ದೊಡ್ಡ ಡಾಕ್ಟರು ಊರಲ್ಲಿಲ್ಲ. ಚಿಕ್ಕ ಡಾಕ್ಟರಿಗೆ ತಲೇನೋವಂತೆ; ಈ ಅವೇಳೆಯಲ್ಲಿ ಬರಲಾಗುವದಲ್ಲವಂತೆ!'

'ಓ! ವಸುದೇವನನ್ನು ಸಂಜೆ. ಆತ ವಾಸಿ ಮಾಡುತ್ತಾನೆ.' ಎಂದು ರೋಗಿಯನ್ನು ಹರಸಿ ಹೊರಟುಹೋದಳು.

ಚಕ್ರಪಾಣಿಯ ಕಣ್ಣಿನಿಂದ ನೀರು ಧಳಧಳನೆ ಸುರಿಯಿತು.

ಮಾಧವರಾಯನು ಪ್ರಜ್ಞೆ ಇಲ್ಲದೆ ಬರಲಲು ಪ್ರಾರಂಭಿಸಿದನು. 'ಓ! ನೀವಾ? ಯಾವ ಕಾಲೇಜಿನ ಪ್ರಿನ್ಸಿಪಾಲು?..ರೆವಿನ್ಯೂ ಕಮೀಷನರಾ?.. ಈ ಕೋಣದ ವಾಹನವೇಕೆ?..ಕೈಯಲ್ಲಿ ಗದೆ..ಓ! ಮರತೆ......ನನ್ನ ಹಳೆಯ ಸ್ನೇಹಿತ ಯಮಧರ್ಮ....ಬಾ. ನಿನ್ನೊಬ್ಬನೊಡನೆ ಮಾತನಾಡ ಬೇಕೆಂದು ಕಾದಿದ್ದೆ....'

ಇಂದಿರೆ ಕುಳಿತಿದ್ದ ಸ್ಥಳದಿಂದ ಎದ್ದಳು. ರೋಗಿಯ ನಾಡಿಯನ್ನು ಪರೀಕ್ಷಿಸಿದಳು. ತನ್ನ ಮುಖವನ್ನೊಮ್ಮೆ ಮೇಲಕ್ಕೆತ್ತಿ ದೈನ್ಯಕಟಾಕ್ಷ ವನ್ನು ಬೀರಿ, ಮೇಜಿನ ಮೇಲಿಟ್ಟಿದ್ದ ತನ್ನ ಚೀಲದಿಂದ ಥರ್ಮಾಮೀಟರನ್ನು ತೆಗೆದುಕೊಂಡು ರೋಗಿಯ ಉಷ್ಣಾಂಶವನ್ನು ನೋಡಿ ನಿಟ್ಟುಸಿರು ಬಿಟ್ಟು, ಅದನ್ನು ಪುನಃ ಚೀಲದಲ್ಲಿಯೇ ಇಟ್ಟು, ಪಿಚಕಾರಿಯನ್ನು ತೆಗೆದುಕೊಂಡು, ಒಂದು ಸಣ್ಣ ಕೊಳವೆಯಲ್ಲಿದ್ದ ದ್ರವವನ್ನು ಅದರಲ್ಲಿ ತೆಗೆದುಕೊಂಡು ರೋಗಿಗೆ ಇಂಜಕ್ಷನ್ ಕೊಟ್ಟಳು.

ಚಕ್ರಪಾಣಿ ಬೆಪ್ಪಾಗಿ ನರ್ಸ್ ಇಂದಿರೆಯ ಕಡೆ ನೋಡಿದನು

'ಕಡೆಯ ಕಲಸ. ಕಾಲುಗಂಟೆಯೊಳಗೆ ಉಷ್ಣಾಂಶ ಸಾಧಾರಣ ಸ್ಥಿತಿಗೆ ಬಂದರೆ ಪುಣ್ಯ. ಕ್ಯಾಂಫರ್ ಇಂಜಕ್ಷನ್ ಕೊಟ್ಟಿದ್ದೇನೆ. ದೇವರಿ ದ್ದಾನೆ!' ಎಂದು ಇಂದಿರೆ ಹೇಳಿದಳು.

'ನಮ್ಮ ಅದೃಷ್ಟ!' ಎಂದು ಹೇಳಿ ಚಕ್ರಪಾಣಿ ಕೈಗಡಿಯಾರವನ್ನು ನೋಡುತ್ತಾ ಕುಳಿತು, ಪ್ರತಿ ನಿಮಿಷವನ್ನೂ ಗಂಟೆಯಂತ ಕಳೆದನು.

ನಡುರಾತ್ರಿ. ಎಲ್ಲೆಲ್ಲೂ ನಿಶ್ಶಬ್ದ. 'ಚಕ್ರಪಾಣಿ!' ಎಂದು ರೋಗಿಯು

ಕೂಗಿದನು. ಮುಂದಿದ್ದ ಮಂಚದ ಮೇಲೆ ಕುಳಿತಿದ್ದ ಚಕ್ರಪಾಣಿ ರೋಗಿಯು ಮಂಚದ ಮೇಲೆ ಕುಳಿತು, 'ಏನು ಮಾಧು ?' ಎಂದು ಕೇಳಿದನು.

ರೋಗಿಯು ಸುತ್ತಲೂ ತನ್ನ ಕಣ್ಣಿನ ದೃಷ್ಟಿಯನ್ನು ಬೀರುತ್ತಾ, 'ಈಕೆ ನರ್ಸ್ ಇಂದಿರಾ!' ಎಂದನು.

'ಹೌದು.' ಎಂದನು ಚಕ್ರಪಾಣಿ

ಇಂದಿರೆಯ ಮುಖದಲ್ಲಿ ಗೆಲುವಿನ ಸೂಚನೆಯು ಕಂಡುಬಂದಿತು ಥರ್ಮಾಮೀಟರನ್ನು ತೆಗೆದುಕೊಂಡು ರೋಗಿಯ ಉಷ್ಣಾಂಶವನ್ನು ನೋಡಿದಳು. 'ಇನ್ನು ಪರವಾ ಇಲ್ಲ.' ಎಂದಳು

'ಚಕ್ರಪಾಣಿ! ದಾಹ! ಹಸಿವು!' ಎಂದನು ರೋಗಿ.

'ಈ ಹೊತ್ತಿನಲ್ಲಿ ಏನು ಮಾಡುವುದು ?' ಎಂದನು ಚಕ್ರಪಾಣಿ

'ಕಿತ್ತಳೆ ಹಣ್ಣಿನ ರಸ ತಂದು ಕೊಡಲೆ ?' ಎಂದು ರೋಗಿಯ ತಲೆಯನ್ನು ಸವರುತ್ತಾ ಇಂದಿರೆ ಕೇಳಿದಳು.

'ಹುಂ.'

'ಈ ಊರಲ್ಲಿ ಕಿತ್ತಳೆ ಹಣ್ಣು ಎಷ್ಟು ಹುಡುಕಿದರೂ ಸಿಕ್ಕಲಿಲ್ಲವಮ್ಮಾ. ಬೆಂಗಳೂರಿಗೆ ಹೇಳಿಕಳುಹಿಸಿದ್ದೇನೆ.'

'ಅಲ್ಲೂ ಈ ಕಾಲದಲ್ಲಿ ಸಿಕ್ಕೋದು ಈ ಆಸ್ಪತ್ರೆಯಲ್ಲಿ ಕೊಡೋಂತ ಹಣ್ಣೇ!' ಎಂದು ಇಂದಿರೆ ಹೇಳಿ, ಕೊಟಡಿಯನ್ನು ಬಿಟ್ಟು ಹೋಗಿ, ಒಂದು ಗಾಜಿನ ಲೋಟದಲ್ಲಿ ಕಿತ್ತಳೆ ಹಣ್ಣಿನ ರಸವನ್ನು ತಂದು, ತಾನೇ ಗುಟುಕು ಗುಟುಕಾಗಿ ರೋಗಿಗೆ ಕುಡಿಸಿದಳು. ಆತ ಕುಡಿದನು. ಸ್ವಲ್ಪ ತೂಕಡಿಸಲು ಮೊದಲುಮಾಡಿದನು.

'ನೀವು ಮಲಗಿಕೊಳ್ಳಿ, ಚಕ್ರಪಾಣಿಗಳೇ. ಪಾಪ! ಮೂರು ದಿನಗಳಿಂದ ನಿದ್ದೆ ಇಲ್ಲ ಎಂದಿರಿ. ರೋಗೀನ ನಾನು ನೋಡಿಕೊಳ್ಳುತ್ತೇನೆ. ನೀವು ಸ್ವಲ್ಪ ನಿದ್ರಿಸಿ.' ಎಂದು ಇಂದಿರೆ ಹೇಳಿದಳು.

'ಎಲ್ಲೂ ಇಲ್ಲದ ಕಷ್ಟ ನಿಮಗೆ ನರ್ಸ್!'

'ದೇವರು ಎಲ್ಲರ ಕಷ್ಟವನ್ನೂ ನೋಡಿಕೊಳ್ಳುವುದಿಲ್ಲವೇ ? ಪರರ ಕಷ್ಟಪರಿಹಾರಕ್ಕಾಗಿ ನಾವು ಒಂದೆರಡು ದಿನ ಕಷ್ಟಪಡದೆ ಹೋದರೆ ನಮ್ಮ ಜೀವದಿಂದ ಏನು ಪ್ರಯೋಜನ ?'

‘ ಅಮ್ಮಾ ! ದೇವರು ನಿಮ್ಮನ್ನು ಚೆನ್ನಾಗಿಟ್ಟಿರಲಿ. ’
ಇಂದಿರೆಯ ಕಣ್ಣಿನಿಂದ ನೀರು ತೊಟ್ಟಿಕ್ಕಿತು.

---

೪

ಆಸ್ಪತ್ರೆಯಲ್ಲಿ ಕೆಲಸ ಮಾಡುವವರೆಲ್ಲಾ ಭಾನುವಾರದ ಬೆಳಗಿನ ಪ್ರಾರ್ಥನೆಗೆ ಚರ್ಚಿಗೆ ಹೊರಡಲು ಅಣಿಯಾಗುತ್ತಿದ್ದರು. ಇಂದಿರೆ ಹಿಂದಿನ ದಿನದ ಸಂಜೆ, ತಾನು ವರ್ಷದ ದುಡಿತದಿಂದಲೂ ಕೂಡಿಹಾಕಿದ್ದ ಹಣದಿಂದ ತಂದ ಮೈಸೂರು ಜಾರ್ಜೆಯಟ್ ಸವರನ್ ಬಣ್ಣದ ಸೀರೆ ಜಾಕೆಟುಗಳಿಂದ ಅಲಂಕೃತಳಾಗಿ, ತನ್ನ ಜಡೆಯ ಮುಡಿಗೆ ಹೂವಿನ ದಂಡೆಯನ್ನು ಸುತ್ತುತ್ತಿದ್ದಳು. ಆಗ ದಾದಿಯೊಬ್ಬಳು ಬಂದು, ‘ ನಿಮ್ಮನ್ನು ದೊಡ್ಡ ಡಾಕ್ಟರಮ್ಮನವರು ಕರೆಯುತ್ತಾರೆ. ’ ಎಂದಳು.

‘ ಬಂದೆ. ’ ಎಂದಳು ಇಂದಿರೆ.

‘ ಎಂಟು ಗಂಟೆಗೆ ಅವರು ಹೊರಟುಹೋಗಬೇಕಂತೆ. ’

‘ ಎಲ್ಲಿಗೆ ? ’

‘ ನಂದಿಗೆ. ’

‘ ಆಗಲೇ ಏಳಾಯ್ತು ! ’

‘ ಹೌದರಮ್ಮಾ. ’

‘ ಬರುತ್ತೇನೆ ನಡೆ. ’ ಎಂದು ಇಂದಿರೆ ಹೇಳಿದಳು. ದಾದಿಯು ಹೊರಟಳು. ಇಂದಿರೆ ದೊಡ್ಡ ಡಾಕ್ಟರ್ ಮಿಸ್ ಮಾರ್ಗರೆಟ್ ಬೈಟ್‌ಲೈಟಳ ರೂಮಿನ ಬಾಗಿಲ ಬಳಿ ಬಂದಳು.

ಡಾಕ್ಟರ್ ಬೈಟ್‌ಲೈಟ್ ತನ್ನ ಅಲಂಕಾರವನ್ನೆಲ್ಲಾ ಮುಗಿಸಿಕೊಂಡು, ಈಜಿ ‘ಚೇರಿ’ನ ಮೇಲೆ ಕುಳಿತು, ಮೇಲುಗಡೆ ಸುತ್ತಲೂ ಗೋಡೆಗಳಿಗೆ ನೇತು ಹಾಕಿದ್ದ ಮಹಾತ್ಮ ಕ್ರಿಸ್ತದೇವನ ಜೀವನದ ವಿಧವಿಧ ದೃಶ್ಯಗಳ ಚಿತ್ರಪಟಗಳ ಕಡೆ ನೋಡಿ, ಆಮೇಲೆ ತನ್ನ ಮುಂದಿದ್ದ ನಿಲುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಾ ಇದ್ದಳು. ಇಂದಿರೆ ಬಾಗಿಲ ಬಳಿ

ಬಂದೊಡನೆಯೇ, 'ಬಾ ಇಂದಿರಾ!' ಎಂದು ತನ್ನ ಬಳಿ ಇದ್ದ ಕುರ್ಚಿಯನ್ನು ಇನ್ನೂ ಹತ್ತಿರ ಎಳೆದಳು.

ಇಂದಿರೆ ಕೊಟಡಿಯೊಳಕ್ಕೆ ಬಂದಳು ಡಾಕ್ಟರು ಅವಳನ್ನು ಕಾಲಿನಿಂದ ತಲೆಯ ವರೆಗೂ ನೋಡಿ ನಸುನಕ್ಕಳು. ಮುಂದಿದ್ದ ಕನ್ನಡಿಯಲ್ಲಿ ಕಾಣು ತ್ತಿದ್ದ ತಮ್ಮಿಬ್ಬರ ಪ್ರತಿಬಿಂಬಗಳನ್ನೂ ನೋಡಿಕೊಂಡು, 'ಇವಳು ನನಗಿಂತಲೂ ರೂಪವತಿ !' ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು. ಅಂದಿನ ಇಂದಿರೆಯ ಉಡುಪು ಆಕೆಗೆ ಬಹು ಚೆನ್ನಾಗಿ ಒಪ್ಪುತ್ತಿತ್ತು.

'ಸೀರೆ ಬಹಳ ಚೆನ್ನಾಗಿದೆ, ಇಂದಿರಾ!' ಎಂದು ಡಾಕ್ಟರ್ ಹೇಳಿದಳು.

'ಇದು ಆಸ್ಪತ್ರೆಯ ನೆನಪು'

'ಅಂದರೆ ?'

'ಇದುವರೆಗೂ ನೀವು ಕೊಡುತ್ತಿದ್ದ ಬಿಳಿ ಸೀರೆಗಳನ್ನು ನಾಲ್ಕು ವರ್ಷಗಳಿಂದಲೂ ಉಡುತ್ತಿದ್ದೆ.' ವರ್ಷದಿಂದ ನೀವು ಕೊಡುತ್ತಿದ್ದ ಸಂಬಳ ದಲ್ಲಿ ಕೂಡಿಟ್ಟು ನಾನು ಸ್ವಂತವಾಗಿ ತೆಗೆದುಕೊಂಡದ್ದು ಇದೊಂದೇ'

'ಇದು ನಿನಗೆ ಬಹು ಚೆನ್ನಾಗಿ ಒಪ್ಪುತ್ತೆ, ಇಂದಿರಾ!'

'ನೀವು ನಂದಿಗೆ ಹೋಗುತ್ತೀರಂತೆ, ಹೌದಾ ?'

'ಮಿಸೆಸ್ ಫರ್ನಾಂಡಿಸ್ ನಂದಿ ನೋಡಬೇಕಂತೆ. ಈ ದಿನ ನಾನೂ ಆಕೆ ಹೋಗಿಬರುತ್ತೇವೆ. ರೋಗಿಗಳನ್ನು ಸ್ವಲ್ಪ ಜಾಗರೂಕತೆಯಿಂದ ನೋಡಿಕೊ.'

'ನಿನ್ನೆ ತಾನೆ ಮದರಾಸಿನಿಂದ ಬಂದ ಪ್ರಯಾಸವಿಲ್ಲವೇ ನಿಮಗೆ ಡಾಕ್ಟರ್ ?'

'ಪ್ರಯಾಸವೇ ! ಈಗೇನು ಮಾಡಲಿ ಇಂದಿರಾ. ಇಪ್ಪತ್ತು ದಿನಗಳ ಹಿಂದೆ ಆಕೆಗೆ ಈ ದಿನ ಹೋಗೋಣವೆಂದು ಹೇಳಿದ್ದೆ. ಈ ದಿನ ಬಿಟ್ಟರೆ ಆಕೆಗೆ ಬಿಡುವಿಲ್ಲವಂತೆ. ಎಕ್ಸ್‌ಟೆನ್‌ಷನ್‌ನಲ್ಲಿ ಮಾಡಿರುವ ತನ್ನ ಮನೆಗೆ ಆಕೆ ನಾಳೆ ಮಗನೊಡನೆ ಹೋಗುತ್ತಾಳೆ.'

'ಇಲ್ಲೇನು ಅನಾನುಕೂಲವಾಗಿತ್ತು ಅವರಿಗೆ ? ನಿಮ್ಮ ಜೊತೆ ಬಹಳ ಅನುಕೂಲವಾಗಿತ್ತು.'

'ಜಾರ್ಜಿಗೂ ವಾಸಿಯಾಗಿದೆ. ಇನ್ನು ಆತ ಇಲ್ಲಿದ್ದರೆ ಚೆನ್ನಾಗಿಲ್ಲ. ಡಾಕ್ಟರ್ ವಿಲ್ ಫ್ರಡ್ ಅಮೆರಿಕಾಕ್ಕೆ ಫರ್ಲೋ ಹೋಗಿರುವುದರಿಂದ ಗಂಡಸರ ವಾರ್ಡ್‌ನನ್ನು ನಾವೇ ನೋಡಿಕೊಳ್ಳಬೇಕಾಗಿದೆ. ಜಾರ್ಜನಿಗೆ ಕಾಯಿಲೆ ಎಂದು ಇಲ್ಲಿಗೆ ಆತನನ್ನು ಕರೆದುಕೊಂಡು ಬಂದು ನನ್ನೊಡನೆ ಇದ್ದಳು. ಇನ್ನು ಒಂದೆರಡು ತಿಂಗಳೊಳಗೆ ಆತನನ್ನು ಡಿಸ್ಟ್ರಿಕ್ಟ್ ಸೂಪರಿಂಟೆಂಡೆಂಟ್ ಆಗಿ ಮಾಡುತ್ತಾರೆ. ಯಾವ ಡಿಸ್ಟ್ರಿಕ್ಟಿಗೆ ಹಾಕುತ್ತಾರೋ ಗೊತ್ತಿಲ್ಲ. ಆಗ ಆಕೆಯೂ ಈ ಊರು ಬಿಡುವಳು.'

'ಹೋ!'

'ಇಂದಿರಾ! ಒಂದು ಆಸೆಯನ್ನು ನಿನಗೆ ತಿಳುಹಿಸ ಹೇಳಿ ನನಗೆ ಆಕೆ ಬಹುವಾಗಿ ಹೇಳಿದಳು.'

'ಜಾರ್ಜನನ್ನು ಮದುವೆಯಾಗುವುದಾ?'

'ಹುಂ!'

'ನನಗೆ ಒಂದು ತಿಂಗಳಿಂದಲೂ ಆಕೆ ನಿತ್ಯ ಹೇಳುತ್ತಿದ್ದಾರೆ.'

'ಓ!'

ಇಂದಿರೆ ಸುಮ್ಮನಿದ್ದಳು.

'ಅವನೂ ಓದಿದವನು. ಡಿ. ಡಿ. ಪರೀಕ್ಷೆಯಾಗಿದೆ. ಮುನ್ನೂರು ರೂಪಾಯಿ ತಿಂಗಳಿಗೆ ಸಂಬಳ ಸಿಕ್ಕುತ್ತೆ. ಆಕೆಯೂ ಲಕ್ಷಾಧೀಶ್ವರೆ. ತನ್ನ ಆಸ್ತಿಯನ್ನೆಲ್ಲಾ ಸಾಕುಮಗ ಮತ್ತು ಅವನ ಹೆಂಡತಿಯ ಹೆಸರಿಗೆ ಮಾಡಿ ಅವರೊಡನಿದ್ದು ತನ್ನ ಕಡೆಗಾಲವನ್ನು ಈ ದೇಶದಲ್ಲಿಯೇ, ಈ ದೇಶದ ಜನರ ಹಿತಕ್ಕಾಗಿಯೇ ಕಳೆಯಬೇಕೆಂದಿದ್ದಾಳೆ!'

'ಇರಬಹುದು ಡಾಕ್ಟರ್. ನನಗೆ ಅವನನ್ನು ಮದುವೆಯಾಗುವುದು ಇಷ್ಟವಿಲ್ಲ.'

'ಏಕೆ?'

'ದಯವಿಟ್ಟು ಕೋಪಿಸಬೇಡಿ ಡಾಕ್ಟರ್. ನೀವು ನಾಲ್ಕು ವರ್ಷಗಳಿಂದಲೂ ತಂಗಿಯಂತೆ ನನ್ನನ್ನು ಸಾಕಿ ಸಲಹಿದ್ದೀರಿ. ನಾನು ಒಂದು ಮಾತು ಕೇಳಲೇ?'

'ಏನು?'

'ನೀವೇಕೆ ಮದುವೆಯಾಗಿಲ್ಲ?'

ಡಾಕ್ಟರ್ ಬ್ರೈಟ್‌ಲೈಟಳ ಮುಖ ಕೆಂಪಗಾಯಿತು. ಕರವಸ್ತ್ರದಿಂದ ಕಣ್ಣನ್ನೊರಸಿಕೊಂಡಳು. ಇಂದಿರೆಯನ್ನು ದೃಷ್ಟಿಸಿ ನೋಡಿದಳು.

ಇಬ್ಬರೂ ಸ್ವಲ್ಪ ಹೊತ್ತು ಒಬ್ಬರ ಮುಖವನ್ನೊಬ್ಬರು ದೃಷ್ಟಿಸಿ ನೋಡಿ, ತಲೆ ತಗ್ಗಿಸಿಕೊಂಡರು.

'ಇಂದಿರಾ! ನನಗೆ ಇನ್ನು ಈ ಜೀವಿತದಲ್ಲಿ ಮದುವೆ ಮಾಡಿಕೊಳ್ಳುವ ಇಷ್ಟವಿಲ್ಲ. ಪ್ರಜಾಸೇವೆ ಮಾಡಲು—ಅದೂ ಈ ದೇಶದಲ್ಲಿ—ನನ್ನ ಜೀವಿತದ ದೀಕ್ಷೆಯನ್ನು ತೆಗೆದುಕೊಂಡಿದ್ದೇನೆ. ತಂಗಿ! ನೀನು ಹಾಗಿರಬೇಡ.'

'ಕುಲಗೋತ್ರಗಳಿಲ್ಲದ ಆಸ್ಪತ್ರೆಯ ಮಗುವಾಗಿ ಬೆಳೆದ ಆತನನ್ನು—ನಿಗ್ರೋಪಿನಂತೆ ಕಪ್ಪಗಿರುವ ಕ್ಷಣಕೋಪಿಯನ್ನು—ಮದುವೆಯಾಗಿ ಚಿರ ದುಃಖಿನಿಯಾಗಿ ಬಾಳುವ ಬದಲು ಈ ಜೀವ ಇಲ್ಲದೆ ಇದ್ದರೂ ಮೇಲು. ಕಷ್ಟದಲ್ಲಿ ಹುಟ್ಟಿ ಬೆಳೆದವಳಿಗೆ, ಮುಂದೆಯೂ ಸುಖದ ಆಸೆಯೇ ಇಲ್ಲದಿದ್ದರೆ ಈ ಜೀವ ಇದ್ದು ತಾನೇ ಏನು ಪ್ರಯೋಜನ?' ಎಂದು ಕಣ್ಣೀರು ಸುರಿಸುತ್ತಾ ಮಗುವಿನಂತೆ ಬಿಕ್ಕಿಬಿಕ್ಕಿ ಅಳುತ್ತಾ ಹೇಳಿದಳು.

ಡಾಕ್ಟರ್ ಬ್ರೈಟ್‌ಲೈಟ್ ಅವಳ ಕತ್ತಿನ ಮೇಲೆ ಕೈ ಹಾಕಿ, ತನ್ನ ಕರವಸ್ತ್ರದಿಂದ ಅವಳ ಕಣ್ಣನ್ನೊರಸಿ, 'ಇಂದಿರಾ! ನಿನಗೆ ಅಪ್ರಿಯವಾದ ಮಾತನಾಡಿದುದಕ್ಕೆ ಕ್ಷಮಿಸು.' ಎಂದಳು.

'ಪ್ರಪಂಚದಲ್ಲಿ ನನ್ನ ಪಾಲಿಗೆ ಸಿಸ್ಟರ್ ಮಾರಿಸ್ ಮತ್ತು ನೀವು ಇದ್ದಿರಿ. ಸಿಸ್ಟರ್ ಚೀಣಾಕ್ಕೆ ವರ್ಗವಾಗಿ ಹೋದ ಮೇಲೆ ನೀವೊಬ್ಬರೇ ಅಂದುಕೊಂಡಿದ್ದೆ. ನಿಮ್ಮ ಇಂದಿನ ಮಾತನ್ನು ಕೇಳಿ, ಪ್ರಪಂಚಕ್ಕೇ ನಾನು ಬೇಡ ಎಂದು ತಿಳಿದಿದ್ದೇನೆ.'

'ಕ್ಷಮಿಸು, ಇಂದಿರಾ! ನಾನು ನಿನ್ನನ್ನು ಕೇಳಕೂಡದೆಂದೇ ಎಷ್ಟೋ ದಿನದಿಂದಲೂ ನನ್ನ ಮನಸ್ಸನ್ನು ತಡೆಹಿಡಿದಿದ್ದೆ. ನಿನ್ನೆ ಮಿಸೆಸ್ ಫರ್ನಾಂಡಿಸ್ ಸುಮ್ಮನೆ ನನ್ನ ಪ್ರಾಣ ಹಿಂಡಿದಳು. ಆಕೆ ಮೊದಲಿನಿಂದಲೂ ನನಗೆ ಬೇಕಾದವಳು. ಅದಕ್ಕಾಗಿ ಕೇಳಿದೆ. ಈ ಆಸ್ಪತ್ರೆ ನಿನ್ನದು. ನೀನು ಮೊದಲು ಈ ಆಸ್ಪತ್ರೆಗೆ ಬಂದ ದಿನದಿಂದಲೂ ಇಲ್ಲಿ ಹೇಗಿದ್ದೆಯೋ ಹಾಗೆಯೇ ಇರು. ಇನ್ನು ಮೇಲೆ ನಿನ್ನ ಬಳಿ ಇಂತಹ ವಿಷಯವನ್ನೇ ಎತ್ತುವುದಿಲ್ಲ. ಮಿಸೆಸ್

ಫರ್ನಾಂಡಿಸ್‌ಗೆ ನಿನ್ನ ಮನಸ್ಸನ್ನು ತಿಳುಹಿಸುತ್ತೇನೆ. ಇನ್ನೊಮ್ಮೆ ಬೇಡು ತ್ತೇನೆ, ನಿನ್ನ ಮನಸ್ಸು ನೋಯಿಸಿದುದಕ್ಕೆ ನನ್ನನ್ನು ಕ್ಷಮಿಸು.'

'ನಿಮ್ಮ ಮನಸ್ಸು ನೋಯುವಂತೆ ಮಾಡಿದ್ದಕ್ಕೆ ನನ್ನನ್ನು ಕ್ಷಮಿಸಿ.' ಎಂದು ದೈನ್ಯದಿಂದ ಇಂದಿರೆ ಹೇಳಿದಳು.

ತಮ್ಮ ಅಂದಿನ ದುಃಖವನ್ನು ಮರೆತು ಮೊದಲಿನಂತೆಯೇ ಇದ್ದ ಪ್ರೇಮವನ್ನು ತೋರಿಸಲು ಒಬ್ಬರಿಗೊಬ್ಬರು ಪ್ರಯತ್ನಿಸಿದರು.

ಉಪದೇಶಿಕೆ ಸಿಸ್ಟರ್ ಫಿಲೋಮಿನಾ ನಸುನಗೆಯಿಂದ ಡಾಕ್ಟರ ಕೊಟಡಿ ಯನ್ನು ಪ್ರವೇಶಿಸಿ, ತನ್ನ ಕತ್ತಿನ ಬೆಳ್ಳಿಯ ಸರಕ್ಕೆ ಸೇತು ಹಾಕಿದ್ದ ಬೆಳ್ಳಿಯ ಶಿಲುಬೆಯನ್ನು ಮುಟ್ಟಿ, 'ನಮಸ್ಕಾರ ಡಾಕ್ಟರ್, ನಮಸ್ಕಾರ ನರ್ಸ್ 'ಇಂದಿರಾ' ಎಂದಳು.

'ನಮಸ್ಕಾರ ಸಿಸ್ಟರ್' ಎಂದು ಇಬ್ಬರೂ ಆಕೆಗೆ ಪ್ರತಿಯಾಗಿ ವಂದಿಸಿದರು.

ಡಾಕ್ಟರು ಎದ್ದು 'ಕುಳಿತುಕೊಳ್ಳಿ ಸಿಸ್ಟರ್ ಫಿಲೋಮಿನ್' ಎಂದು ಮೇಜಿನ ಮತ್ತೊಂದು ಕಡೆಯಿದ್ದ ಕುರ್ಚಿಯನ್ನು ತೋರಿಸಿದಳು. ಸಿಸ್ಟರ್ ಕುರ್ಚಿಯ ಮೇಲೆ ಕುಳಿತಳು. ಡಾಕ್ಟರ್ ಮೇಜಿನ ಮೇಲಿದ್ದ ವಿದ್ಯುತ್ ಗುಂಡಿಯನ್ನು ಒತ್ತಿ, ಕುರ್ಚಿಯ ಮೇಲೆ ಕುಳಿತಳು. ದಾದಿಯು ಒಂದು ನಿಂತಳು. 'ಮೂವರಿಗೂ ಕಾಫಿ ತಂದು ಕೊಡು.' ಎಂದು ಡಾಕ್ಟರ್ ದಾದಿಗೆ ಹೇಳಿ, 'ಏನು ಸಮಾಚಾರ ಸಿಸ್ಟರ್?' ಎಂದು ಉಪದೇಶಿಕಳನ್ನು ಕೇಳಿದಳು.

ದಾದಿಯು ಕಾಫಿ ತಂದುಕೊಟ್ಟಳು. ಮೂವರೂ ಕಾಫಿ ಕುಡಿದರು.

'ಮಾಧವರಾವ್ ದಾರಿಗೆ ಬಂದಿದ್ದಾನೆ' ಎಂದು ಸಿಸ್ಟರ್ ಹೇಳಿದಳು.

ಡಾಕ್ಟರ್ ಮುಖದಲ್ಲಿ ತೇಜಸ್ಸು ಬಂದಿತು. ಇಂದಿರೆ ಒಮ್ಮೆ ಸಿಸ್ಟರನ್ನು ನೋಡಿ, ಮುಂದೆ ಮೇಜಿನ ಮೇಲಿದ್ದ ಹೂ-ಕುಂಡದಲ್ಲಿದ್ದ ಗುಲಾಬಿ ಹೂವಿನ ಕಡೆ ನೋಡುತ್ತಿದ್ದಳು.

'ಏನು ಮಾಡಿದೆ ಸಿಸ್ಟರ್?' ಎಂದು ನಸುನಗೆಯಿಂದ ಡಾಕ್ಟರ್ ಕೇಳಿದಳು.

'ಬಂದ ದಿನದಿಂದಲೂ ಆತನ ಹಾಸಿಗೆಯ ಬಳಿ ಮೊಣಕಾಲೂರಿ,

ಮಹಾತ್ಮ ಏಸುವನ್ನು ಪ್ರಾರ್ಥಿಸಿ, ಶಿಲುಬೆಯನ್ನು ಮುಟ್ಟಿದ ಔಷಧವನ್ನು ಆತನಿಗೆ ಕೊಡಿಸುತ್ತಿದ್ದೆ. ನರ್ಸ್ ಇಂದಿರಾನೇ ಔಷಧ ಕೊಡುತ್ತಿದ್ದಳು.'

'ಹೌದು.' ಎಂದು ಇಂದಿರೆ ಹೇಳಿದಳು.

'ಆಮೇಲೆ?' ಎಂದಳು ಡಾಕ್ಟರ್.

"ಈಗ ಎಂಟು ದಿನದಿಂದ ಆತನಿಗೆ ಮೇಲಾಗುತ್ತಿದೆ. ನಿತ್ಯ ಮೂರು ಹೊತ್ತೂ ಹೋಗಿ ಆತನ ಹಾಸಿಗೆಯ ಹತ್ತಿರ ಆತನಿಗೆ ವಾಸಿಯಾಗುವಂತೆ ಏಸುದೇವನನ್ನು ಪ್ರಾರ್ಥಿಸುತ್ತಾ, ಒಮ್ಮೆ, 'ಒಬ್ಬ ಹೆಂಗಸು ಹದಿನೆಂಟು ವರ್ಷಗಳಿಂದಲೂ ಏಳಲೂ ತ್ರಾಣವಿಲ್ಲದೆ ದುರ್ಬಲಳಾಗಿದ್ದಳು. ಏಸು ದೇವರು ಅವಳನ್ನು ನೋಡಿ, ಹತ್ತಿರ ಕರೆದು 'ನಿನ್ನ ದೌರ್ಬಲ್ಯ ಹೋಗಿದೆ' ಎಂದು ಆಕೆಯನ್ನು ಸ್ಪರ್ಶಿಸಿದರು. ಆಕೆ ಎಲ್ಲರಂತೆಯೇ ಆಗಿ ದೇವನನ್ನು ಕೊಂಡಾಡಿದಳು.' ಎಂದೆ. ಆತ 'ಹೌದು; ಲ್ಯೂಕ್ ಸಾಧುವು ಈ ವಚನ ವನ್ನು ಹೃದಯಂಗಮವಾಗಿ ಹೇಳಿದ್ದಾನೆ. ಕ್ರಿಸ್ತದೇವನ ಹೃದಯವನ್ನು ಆತ ಬಹು ಹತ್ತಿರದಲ್ಲಿ ಅರಿತಿದ್ದಾನೆ.' ಎಂದನು."

'ಸಂತೋಷ.' ಎಂದು ಡಾಕ್ಟರ್ ಹೇಳಿದಳು.

"ಆಮೇಲೆ ಮತ್ತೊಂದು ದಿನ 'ಒಬ್ಬ ಕುಷ್ಠರೋಗಿಯು ಏಸು ದೇವರ ಹತ್ತಿರ ಬಂದು, 'ನೀವು ಮನಸ್ಸು ಮಾಡಿದರೆ ನನ್ನನ್ನು ಶುದ್ಧನಾಗಿ ಮಾಡಬಲ್ಲಿರಿ.' ಎಂದು ಪ್ರಾರ್ಥಿಸಿದನು. ಏಸುದೇವರ ಅಂತಃಕರಣವು ಕರಗಿ ಅವರು ಅವನನ್ನು ಸ್ಪರ್ಶಿಸಿ, 'ನೀನು ಶುದ್ಧನಾಗು.' ಎಂದರು. ಆತ ತಕ್ಷಣ ರೋಗನಿವಾರಣೆಯನ್ನು ಹೊಂದಿದ. ಆಗ ಏಸುದೇವರು, 'ಇದನ್ನು ಯಾರಿಗೂ ಹೇಳಬೇಡ.' ಎಂದರು. ಆದರೆ ಆತ ಎಲ್ಲರಿಗೂ ಹೇಳಿದ. ಅವರು ಪಟ್ಟಣವನ್ನು ಪ್ರವೇಶಿಸಲೂ ಕೂಡ, ನೋಡಲು ಬರುತ್ತಿದ್ದ ಜನಸಂದಣಿ ಯಿಂದ ಸಾಧ್ಯವಾಗದೆ ಅವರು ಮರುಭೂಮಿಯಲ್ಲಿರಲು, ಅಲ್ಲಿಯೂ ಜನರು ಬಂದು, ಅವರಿಗೆ ತಮ್ಮ ತೊಂದರೆಗಳನ್ನು ಹೇಳಿಕೊಂಡು ಕಾಪಾಡಬೇಕೆಂದು ಕೇಳಿಕೊಂಡರು.' ಎಂದೆ. ಆತ 'ಹೌದು; ಜನತೆಗಾಗಿ ಜೀವ ಕೊಟ್ಟ ಮಹಾತ್ಮ ಏಸುದೇವ. ಸಾಧು ಮಾರ್ಕ್ ಇದನ್ನು ಚೆನ್ನಾಗಿ ವಿವರಿಸಿದ್ದಾರೆ.' ಎಂದನು."

'ಬೈಬಲನ್ನು ಆತ ಚೆನ್ನಾಗಿ ಓದಿದ್ದಾರೆ.' ಎಂದು ಡಾಕ್ಟರ್ ಹೇಳಿದಳು.

"ಹೌದು; ನಾನೂ ಆತನನ್ನು 'ಬೈಬಲನ್ನು ಚೆನ್ನಾಗಿ ಓದಿದ್ದೀರಿ.' ಎಂದೆ. ಆತ 'ಅದು ನನ್ನ ನಿತ್ಯ ಪಾರಾಯಣದ ಪುಸ್ತಕ.' ಎಂದ. 'ನಿಮಗೆ ಕ್ರಿಸ್ತದೇವನಲ್ಲಿ ಪ್ರೀತಿ ಇದೆಯಾ?' ಎಂದೆ. 'ಮಹಾತ್ಮನಲ್ಲಿ ಪ್ರೀತಿ ಇಲ್ಲವೇ! ನಮ್ಮ ಕಷ್ಟಗಳನ್ನು ಪರಿಹರಿಸುವ ಆ ಮಹಾತ್ಮನನ್ನು ಪ್ರೀತಿಸದವನು ಬಾಳುತ್ತಾನೆಯಾ?' ಎಂದ."

'ಸರಿ.'

"ನಾನು 'ಕ್ರೈಸ್ತಧರ್ಮದಲ್ಲಿ ನಿಮಗೆ ವಿಶ್ವಾಸವಿದೆಯಾ?' ಎಂದು ಕೇಳಿದುದಕ್ಕೆ ಆತ 'ನಾನು ಅದನ್ನು ಮೆಚ್ಚಿದ್ದೇನೆ.' ಎಂದ."

'ಬಹಳ ಸಂತೋಷ.' ಎಂದು ಡಾಕ್ಟರ್ ಸಿಸ್ಟರಿಗೆ ಹೇಳಿ, 'ನಿನ್ನೆ ಆತನಿಗೆ ಹೇಗಿತ್ತು?' ಎಂದು ನರ್ಸ್ ಇಂದಿರೆಯನ್ನು ಕೇಳಿದಳು.

'ನಿನ್ನೆಗೆ ಇಪ್ಪತ್ತೆರಡು ದಿನವಾಯ್ತು. ನಿನ್ನೆಯಿಂದ 'ನಾರ್ಮಲ್ ಟೆಂಪರೇಚರ್' ಇದೆ. ಈ ದಿನ ಕಾಫಿ ಕೊಡಬಹುದೆಂದು ಹೇಳಿದ್ದೇನೆ. ಆತನಿಗೂ ವ್ಹೇ, ಆರೆಂಜ್ ಜ್ಯೂಸ್, ಹಾಲೂ ಕೂಡ ಬೇಸರಿಕೆಯಾಗಿದೆ.'

'ಕಾಫಿಯನ್ನು ಕೊಡಬಹುದು' ಎಂದು ಇಂದಿರೆಗೆ ಹೇಳಿ, 'ಇನ್ನೇನು ಸಿಸ್ಟರ್?' ಎಂದು ಡಾಕ್ಟರ್ ಕೇಳಿದಳು.

'ನಾಳೆ ಆತನನ್ನು ಮನೆಗೆ ಕರೆದುಕೊಂಡು ಹೋಗಬೇಕೆಂದು ಆತನ ಗೆಳೆಯ ಮಿಸ್ಟರ್ ಚಕ್ರಪಾಣಿ ನಿನ್ನೆ ಹೇಳಿದ್ದರು. ಆತ ಇನ್ನೂ ಒಂದು ಹತ್ತು ದಿನವಾದರೂ ಇದ್ದರೆ ಆತನಿಗೆ ಕ್ರೈಸ್ತಧರ್ಮದ ದೀಕ್ಷೆಯನ್ನು ಕೊಟ್ಟು ಕಳುಹಿಸಲು ಅನುಕೂಲವಾಗುವಂತೆ ಮಾಡುತ್ತೇನೆ.'

"ಆಗಲಿ ಸಿಸ್ಟರ್. ಹೋಗಿ ಆತನಿಗೆ 'ಇನ್ನೂ ಹತ್ತು ದಿನ ಇರಬೇಕು; ಇಲ್ಲದೆ ಹೋದರೆ ರಿಲ್ಯಾಪ್ಸ್ ಆಗಿ ಹೋದರೆ ಬಹು ಕಷ್ಟ.' ಎಂದು ಹೇಳಿ, ಆತನನ್ನು ನಿಲ್ಲಿಸುತ್ತೇನೆ."

'ಅಷ್ಟು ಮಾಡಿ. ಎಲ್ಲಾ ಏಸುದೇವನ ಆಜ್ಞೆ!' ಎಂದು ಸಿಸ್ಟರ್ ಶಿಲುಬೆಯನ್ನು ಮುಟ್ಟಿ, ಮೇಲೆ ನೋಡಿದಳು.

ಆಗ ದಾದಿಯೂ ಬಂದು, 'ಮಿಸೆಸ್ ಫರ್ನಾಂಡಿಸ್ ಗೇಟಿನ ಬಳಿ ನಿಂತು ನಿಮಗಾಗಿ ಕಾದಿದ್ದಾರೆ, ಡಾಕ್ಟರಮ್ಮ.' ಎಂದಳು.

'ಬಂದೆ ಎಂದು ಹೇಳು.' ಎಂದು ದಾದಿಗೆ ಹೇಳಿ, 'ಆತನಿಗೆ ಕಾಫಿ ತೆಗೆದುಕೊಂಡು ಹೋಗಿ ಕೊಡು ಇಂದಿರಾ. ನಾಳೆ ಮಧ್ಯಾಹ್ನ ಸಂದಿಯಿಂದ ಬರುತ್ತೇವೆ.' ಎಂದು ನರ್ಸ್ ಇಂದಿರೆಗೆ ಹೇಳಿ, 'ಆತನಿಗೆ ಹೇಳಿ ಹೋಗುತ್ತೇನೆ ಸಿಸ್ಟರ್.' ಎಂದು ಸಿಸ್ಟರ್ ಫಿಲೋಮಿನ್‌ಗೆ ಡಾಕ್ಟರ್ ಹೇಳಿದಳು.

—

೫

ಇಂದಿರೆ ಕೈಯಲ್ಲಿ ಕಾಫಿಯಿದ್ದ ಗಾಜಿನ ಲೋಟವನ್ನು ಹಿಡಿದು ಕೊಂಡು ಮಾಧವರಾಯನ ಕೊಟಡಿಗೆ ಬಂದಳು. ಆತ ಮಂಚದ ಮೇಲಿದ್ದ ಹಾಸಿಗೆಯ ತಲೆದಿಂಬಿಗೆ ಒರಗಿಕೊಂಡು ಕುಳಿತಿದ್ದನು. 'ನಿನ್ನೆ ಹೇಳಿದ್ದಂತೆಯೇ ಕಾಫಿ ತಂದಿದ್ದೇನೆ, ತೆಗೆದುಕೊಳ್ಳಿ.' ಎಂದು ಇಂದಿರೆ ಹೇಳಿದಳು.

ಮಾಧವರಾವ್ ಇಂದಿರೆಯ ಕಡೆ ನೋಡಿದನು. ಅವಳ ಉಡುಪನ್ನು ನೋಡಿ ತಲೆದೂಗಿದನು. ಆಕೆಯ ಹಣೆಯನ್ನು ನೋಡಿ, 'ಕುಂಕುಮ, ಇಂದಿರಾದೇವಿ!' ಎಂದನು.

'ಇಂದಿರಾಬಾಯಿ!' ಎಂದು ಆಕೆ ನಸುನಗೆಯಿಂದ ಹೇಳಿದಳು.

'ಕ್ರಿಸ್ತಳು....!'

'ಅಲ್ಲ; ಇನ್ನೂ ಹಿಂದು—ಬ್ರಾಹ್ಮಣಿತಿ.'

'ಆಂ!'

'ಕ್ರೈಸ್ತ ಮತಕ್ಕೆ ಸೇರುವ ನಿಮಗೆ ಆಶ್ಚರ್ಯವೇಕೆ?'

'ಕ್ರೈಸ್ತ ಮತಕ್ಕೆ ನಾನು ಸೇರುವೆನೆಂದು ಯಾರು ಹೇಳಿದರು?'

'ಸಿಸ್ಟರ್ ಫಿಲೋಮಿನ್ ಹತ್ತಿರ ಹೇಳಿದಿರಂತೆ.'

'ಏನೆಂದು?' ಎಂದು ಮುಖದಲ್ಲಿ ಮುಗುಳುನಗೆಯನ್ನು ಸೂಸಿದನು.

'ಕ್ರೈಸ್ತ ಮತವನ್ನು ಬಹು ಮೆಚ್ಚಿದಿರಂತೆ.'

'ಮಹಾತ್ಮ ಏಸುವನ್ನು ಯಾರು ಮೆಚ್ಚುವುದಿಲ್ಲ? ಪ್ರಪಂಚದ ಮಹದ್ವ್ಯಕ್ತಿಗಳೆಲ್ಲಾ ಪೂಜಾರ್ಹರು.'

'ಬೈಬಲನ್ನು ಎಂದಿನಿಂದ ಅಷ್ಟು ಚೆನ್ನಾಗಿ ಅಭ್ಯಾಸ ಮಾಡಲು ಪ್ರಾರಂಭಿಸಿದಿರಿ?'

'ಎಂ. ಎ. ಗೆ ಓದುತ್ತಿದ್ದಾಗ. ಬೈಬಲ್ಲೂ ಇಂಗ್ಲಿಷ್ ಸಾಹಿತ್ಯದಲ್ಲಿ ಒಂದು ಪಠ್ಯಪುಸ್ತಕ.'

'ಹಾಗಾ!'

'ಈಗ ತಿಳಿಯಿತಾ, ಇಂದಿರಾಬಾಯಿ! ಅನಾಥನಾಗಿದ್ದಾಗ ಕ್ರೈಸ್ತ ಪಾದ್ರಿಗಳು ಕೊಟ್ಟ ಆಸೆಗಳಿಗೇ ಮತ ಬಿಡದವನು ಸಂಪಾದಿಸುವ ಈ ಕಾಲ ದಲ್ಲಿ ಬಿಡುತ್ತೇನೆಯಾ?'

ಇಂದಿರೆ ಮುಖದಲ್ಲಿ ಮುಗುಳುನಗೆಯನ್ನು ಸೂಸಿದಳು.

'ನೀವು ಇಲ್ಲಿಗೆ ಹೇಗೆ ಬಂದು ಸೇರಿದಿರಿ?' ಎಂದು ಮಾಧವರಾವ್ ಇಂದಿರಾಬಾಯಿಯನ್ನು ಕೇಳಿದನು.

"ನನ್ನ ನಾಲ್ಕನೆಯ ವಯಸ್ಸಿನಲ್ಲಿಯೇ ಊರಿಗೆ ಬಂದ ಸಿಡುಬಿನಿಂದ ನಮ್ಮ ತಂದೆ ತೀರಿಹೋದರು. ಅವರು ಪುರೋಹಿತರಾಗಿದ್ದರು. ಆಸ್ತಿ ಏನೂ ಇರಲಿಲ್ಲ. ನನ್ನ ತಾಯಿ ನಾಲ್ಕೈದು ಮನೆಗಳಲ್ಲಿ ನೀರು ಸೇದಿ ಹಾಕಿ, ಮೆಣಸಿನ ಪುಡಿ ಮಾಡಿ, ನನ್ನನ್ನು ಸಾಕಿದಳು. ನಾನು ಎಸ್. ಎಸ್. ಎಲ್. ಸಿ. (ಮೆಟ್ರಿಕ್)ಗೆ ಬಂದಾಗ—ನನ್ನ ಹದಿನಾಲ್ಕನೆಯ ವಯಸ್ಸಿನಲ್ಲಿ—ಆಕೆ ನ್ಯೂಮೋನಿಯ ಬಂದು ತೀರಿಹೋದಳು. 'ವಂಶದ ಗೌರವ ಕೆಡದಂತೆ ಓದಿ, ನಾಲ್ಕು ಜನಕ್ಕೆ ಕೈಲಾದ ಉಪಕಾರ ಮಾಡಿ ಬಾಳು.' ಎಂದು ಸಾಯುವಲ್ಲಿ ಹೇಳಿದಳು. ಮಿಷನ್ ಸ್ಕೂಲಿನ ಹೆಡ್ಮಿಷ್ಟ್ರೆಸ್ ಸಿಸ್ಟರ್ ಮಾ:ರಿಸ್, ನನಗೆ ಎಲ್ಲಾ ಸಹಾಯ ಮಾಡಿ, ಕಾನ್ವೆಂಟಿನಲ್ಲಿಯೇ ಇಟ್ಟುಕೊಂಡು ಓದಿಸಿ, ಅಲ್ಲೂ ನನ್ನ ವಿಧದ ಪ್ರಾರ್ಥನೆಗೆ ಯಾರೂ ಅಡ್ಡಿ ಬರದಂತೆ ಏರ್ಪಾಡು ಮಾಡಿ ಎಸ್. ಎಸ್. ಎಲ್. ಸಿ. ಪಾಸಾದ ಮೇಲೆ, ಇಲ್ಲಿ ನರ್ಸಿಂಗ್ ಟ್ರೈನಿಂಗಿಗೆ ಕಳುಹಿಸಿದರು.'

'ಕ್ಷಮಿಸಿಕೊಳ್ಳಿ ಇಂದಿರಾಬಾಯಿ' ಎಂದು ಮಾಧವರಾವ್ ಹೇಳಿದನು.

ಪಕ್ಕದಲ್ಲಿದ್ದ ಸ್ಟೂಲನ್ನು ಎಳೆದುಕೊಂಡು ಇಂದಿರೆ ಅದರ ಮೇಲೆ ಕುಳಿತು, ' ಕಾಫಿ ಆರಿ ಹೋಗುತ್ತೆ, ತೆಗೆದುಕೊಳ್ಳಿ ' ಎಂದಳು.

' ಇಪ್ಪತ್ತು ದಿನದ ಮೇಲೆ ಹೊಸ ಜೀವ ಬಂದ ಮೇಲೆ ಪುನಃ ಕಾಫಿಯನ್ನು ಪಾನ ಮಾಡುತ್ತೇನೆ. ಅದೂ ತಮ್ಮ ಅಮೃತಹಸ್ತದಿಂದಲೇ ಆಗಲಿ!'

ಇಂದಿರೆಯು ನಸುನಕ್ಕು ತಾನೇ ಮಾಧವರಾಯನಿಗೆ ಕಾಫಿಯನ್ನು ಕುಡಿಸಿದಳು.

' ಆಮೇಲೆ ? ಇಲ್ಲಿ ಟ್ರೈಸಿಂಗ್ ಪಾಸು ಮಾಡಿದಿರಿ . . ' ಎಂದು ಮಾಧವ ರಾವ್ ಹೇಳಿದನು.

' ಹೌದು. ಹೋದ ಸಲಕ್ಕೇ ಮೂರು ವರ್ಷ ಮುಗಿಯಿತು. ರಿಜಿಸ್ಟರ್ಡ್ ನರ್ಸ್ ಪರೀಕ್ಷೆಯಲ್ಲಿ ದಕ್ಷಿಣ ದೇಶಕ್ಕೆಲ್ಲಾ ಮೊದಲನೆಯವಳಾಗಿ ಪಾಸು ಮಾಡಿದ್ದೇನೆ. ಈ ಆಸ್ಪತ್ರೆಯ ವಿಧಿಯಂತೆ, ನಾನು ಪತ್ರ ಬರೆದು ಕೊಟ್ಟಿದ್ದಂತೆ, ನಿನ್ನೆಗೆ ಒಂದು ವರ್ಷ ಹೋಂ ನರ್ಸ್ ಕೆಲಸವೂ ಮುಗಿಯಿತು.'

ನಿಮ್ಮನ್ನು ಚರ್ಚಿಗೆ ಕರೆದುಕೊಂಡು ಹೋಗದೆ ಬಿಟ್ಟದ್ದು ಆಶ್ಚರ್ಯ. '

' ಸಿಸ್ಟರ್ ಮಾ:ರಿಸ್, ಡಾಕ್ಟರ್ ಮಾರ್ಗರೆಟ್ ಬೈಟಲೈಟರಿಗೆ ನನಗೆ ಹಿಂಸೆ ಕೊಡದಂತೆ, ನನ್ನ ಮನ ನೋಯದಂತೆ ವಿದ್ಯೆ ಕಲಿಸಬೇಕೆಂದು ಕಾಗದ ಬರೆದಿದ್ದರು. ಆಕೆ ನಿಜವಾಗಿಯೂ ಸಿಸ್ಟರ್ ! ಈ ಆಸ್ಪತ್ರೆಯ ನಿಯಮದಂತೆ ಇಲ್ಲಿ ಕೆಲಸದಲ್ಲಿರುವವರೆಲ್ಲರೂ ಇಲ್ಲಿನ ಚಾಪೆಲ್ ಸರ್ವಿಸ್ಸಿಗೆ ಮಾತ್ರ ನಿತ್ಯವೂ ಹೋಗಲೇಬೇಕು. ನಾನೂ ಹೋಗುತ್ತಿದ್ದೆ, ನನ್ನ ದೇವರನ್ನು ಅಲ್ಲಿ ನಾನು ನೆನೆಯುತ್ತಿದ್ದೆ. '

' ಈಗ ಎಲ್ಲಿದ್ದಾರೆ ಸಿಸ್ಟರ್ ಮಾ:ರಿಸ್? '

' ಚೀಣಾದಲ್ಲಿ. '

ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾ ಕೆಲವು ನಿಮಿಷ ಕಳೆದರು.

' ನರ್ಸಾಗಿ ನಾಲ್ಕು ಜನಕ್ಕೆ ಸಹಾಯಮಾಡಿ ನನ್ನ ಜೀವನವನ್ನು ಕಳೆಯಬೇಕೆಂದಿದ್ದೇನೆ ' ಎಂದು ಇಂದಿರೆ ಹೇಳಿದಳು.

' ನನ್ನ ಜೀವನವನ್ನು ಬೆಳಗಿ ಸಹಾಯ ಮಾಡಬೇಕೆಂದು ನಾನು ಪ್ರಾರ್ಥಿಸಿದರೆ? ' ಎಂದು ಮಾಧವರಾವ್ ಇಂದಿರೆಯ ಕೈಹಿಡಿದುಕೊಂಡನು.

ಆ ಮಾತಿಗೆ ಉತ್ತರವಾಗಿ ಇಂದಿರೆ ಅವನಿಗೆ ಮುತ್ತನ್ನೊಂದನ್ನು ಕೊಟ್ಟಳು.

ಆತ ಆಕೆಯ ಕೆನ್ನೆಗೆ ಪ್ರತಿಯಾಗಿ ಮುತ್ತಿಟ್ಟನು.

ಇಂದಿರೆ ಓರೆನೋಟದಿಂದ ಆತನನ್ನು ನೋಡಿ, ' ನನಗೆ ಟೈಫಾಯಿಡ್ ಎಲ್ಲಿ ಬರುತ್ತೋ ಎಂದು ನಿಮಗೆ ಭಯವಾ ? ' ಎಂದು ಕೇಳಿದಳು.

' ಈಗ ನೀನು ಸನ್ನವಳು. ಭಯಪಡಲೇಬೇಕು. '

' ದೇವನಲ್ಲಿ ನನ್ನ ಪ್ರಾರ್ಥನೆ ಸಂದಿತು. ನಾನು ಭಾಗ್ಯಶಾಲಿ ! '

' ಇನ್ನೂ ಹತ್ತು ದಿನ ಇರಬೇಕೆಂದು ಸ್ವಲ್ಪ ಹೊತ್ತಿನ ಹಿಂದೆ ಡಾಕ್ಟರು ಬಂದು ಹೇಳಿ ಹೋದರು, ಇಂದಿರಾಬಾಯಿ. '

' ಹೌದು, ಸಿಸ್ಟರ್ ಫಿಲೋಮಿನ್‌ಳ ಪ್ರಾರ್ಥನೆ ಅದು. ಆಕೆ ನಿಮ್ಮನ್ನು ಹತ್ತು ದಿನದೊಳಗೆ ಕ್ರೈಸ್ತಮತಕ್ಕೆ ಸೇರಿಸಲು ಅವಧಿ ತೆಗೆದುಕೊಂಡಿದ್ದಾಳೆ. '

' ಓ ! '

' ಇರಿ. ನನಗೂ ಹತ್ತು ದಿನ ಕಾಲ ದೊರೆತರೆ ಒಳ್ಳೆಯದೇ ಆಯ್ತು. ನಿಮಗೂ ಚೆನ್ನಾಗಿ ಮೇಲಾಗುತ್ತದೆ. ಅದು ಸರಿ. ಮೈಸೂರಲ್ಲಿ ಎಲ್ಲಿದ್ದು ಓದಿದಿರಿ ? '

' ಅನಾಥಾಲಯದಲ್ಲಿ. '

' ನಿಮ್ಮ ವಿಷಯವೆಲ್ಲಾ ಗೊತ್ತಿದೆ. ಚಕ್ರಪಾಣಿಯವರು ನಿಮ್ಮ ಗೆಳೆಯರಾ ? '

' ಹೌದು. ನಾನೂ ಆತನೂ ಎಂ. ಎ.ನಲ್ಲಿ ಜತೆಯಲ್ಲಿಯೇ ಓದುತ್ತಿದ್ದೆವು. ಆಮೇಲೆ ಆತ ಬಿ. ಎಲ್. ಗೆ ಮದರಾಸಿಗೆ ಹೋದ. ನಾನು ಸಿವಿಲ್ ಸರ್ವಿಸ್ಸಿಗೆ ಕಟ್ಟಿದೆ. ಪರೀಕ್ಷೆಯಲ್ಲಿ ಎರಡೇ ರ್‍ಯಾಂಕು ತೆಗೆದುಕೊಂಡರು. ಮೂರನೆಯವನಾದ ನನ್ನನ್ನು ರೆವಿನ್ಯೂ ಪ್ರೊಬೇಷನರಾಗಿ ತೆಗೆದುಕೊಂಡರು. ಚಕ್ರಪಾಣಿಯ ಮನೆಯವರೆಲ್ಲರಿಗೂ ನನ್ನಂತೆಯೇ ಬಹಳ ಸಹಾಯಮಾಡಿದಿರಂತೆ ! '

' ಮಹಾ ಏನು ಸಹಾಯ! ದೇವರು ನನಗೆ ಮಾಡುತ್ತಿರುವ ಸಹಾಯದಲ್ಲಿ ತೃಣ ಕೂಡ ಅಲ್ಲ ಅದು ! '

'ಆಕೆಗೆ ನಿಮ್ಮ ಮೇಲೆ ಬಹು ವಿಶ್ವಾಸ.'

ಇಂದಿರೆ ಮುಗುಳುನಗೆ ಸೂಸಿದಳು.

'ನನ್ನದೊಂದು ಪ್ರಾರ್ಥನೆ' ಎಂದು ಇಂದಿರೆ ಮಾಧವರಾಯನನ್ನು ಕೇಳಿದಳು.

'ಏನು ಹೇಳಿ ಇಂದಿರಾಬಾಯಿ?'

'ಹತ್ತುದಿನದ ಹಿಂದೆ ನಮ್ಮ ಜನದ ಹೆಂಗಸೊಬ್ಬಳು ಅವಳಿ-ಜವಳಿ ಮಕ್ಕಳನ್ನು ಈ ಆಸ್ಪತ್ರೆಯಲ್ಲಿಯೇ ಹೆತ್ತಿದ್ದಾಳೆ. ಎರಡೂ ಗಂಡು! ಬಹು ಚೆನ್ನಾಗಿವೆ! ಅವರು ಬಹು ಬಡವರು. ಭಿಕ್ಷದಿಂದ ಜೀವಿಸುತ್ತಿದ್ದಾರೆ. ಇವಕ್ಕೆ ಮೊದಲೇ ಅವರಿಗೆ ಬದುಕಿರುವ ಮಕ್ಕಳೇ ಏಳಿವೆಯಂತೆ! ಎರಡು ಹೋದವಂತೆ. ಇವೆರಡನ್ನೂ ಸಾಕಲು ಶಕ್ತಿಯಿಲ್ಲದೆ ಆಸ್ಪತ್ರೆಗೆ ಕೊಡುವು ದಾಗಿ ಆಕೆ ಅವಳ ಗಂಡ ಇಬ್ಬರೂ ಹೇಳಿದ್ದಾರಂತೆ. ಅವು ಸತ್ತುಹೋದ ವೆಂದು ಅವರ ಬಂಧು ಬಳಗಕ್ಕೆ ಹೇಳುವರಂತೆ!'

'ಆಂ!'

'ಹೌದು, ನೀವು ಒಪ್ಪುವುದಾದರೆ ನಾವು ಅವನ್ನು ಸಾಕಬಹುದು. ನಾಳೆ ಆಕೆ ಆಸ್ಪತ್ರೆ ಬಿಡುತ್ತಾಳೆ. ನಮಗೆ ಮಕ್ಕಳನ್ನು ಕೊಡುವಂತೆ ಆಕೆ ಯನ್ನು ಒಪ್ಪಿಸುತ್ತೇನೆ. ಕೆಲವು ದಿನ ನಿಮ್ಮ ಗೆಳೆಯ ಚಕ್ರಪಾಣಿಯು ಅವನ್ನು ಸಾಕಿಕೊಂಡಿರುವಂತೆ ಹೇಳಿ.'

'ಆಗಲಿ ಹೇಳುತ್ತೇನೆ. ಹಾಗೆಯೇ ಮಾಡಿ ಇಂದಿರಾಬಾಯಿ. ಪಾಪ! ಆ ಬಡ ದಂಪತಿಗಳಿಗೆ ಈ ಹಣ ಕೊಡಿ' ಎಂದು ಮಾಧವರಾವ್ ತಲೆದಿಂಬಿನ ಕೆಳಗೆ ಇದ್ದ ಹಣದ ಚೀಲದಿಂದ ಇಪ್ಪತ್ತು ರೂಪಾಯಿಗಳನ್ನು ತೆಗೆದು ಇಂದಿರೆಯ ಕೈಯಲ್ಲಿ ಕೊಟ್ಟನು.

'ಆಸ್ಪತ್ರೆಯನ್ನು ಮಕ್ಕಳೊಡನೆ ಬಿಟ್ಟರೆ ಅವರೂ ಹಣ ಕೊಡಬೇಕಾ ಗುತ್ತೆ. ಇದನ್ನು ಅವರಿಗೆ ಕೊಡುತ್ತೇನೆ. ನಿಮ್ಮದು ಬಹು ಮುಂದಾ ಲೋಚನೆ' ಎಂದು ಮಾಧವರಾಯನ ಬುದ್ಧಿಯನ್ನು ಮೆಚ್ಚಿ ಇಂದಿರೆ ನುಡಿ ದಳು.

'ನೀವೂ ನನ್ನ ಬುದ್ಧಿಯನ್ನು ಮೆಚ್ಚಿದಿರಲ್ಲಾ, ಸಂತೋಷ.'

'ನಿಮ್ಮ ಬಳಿ ಈ ಆಸ್ಪತ್ರೆಯಲ್ಲಿಯೂ ನಾನೊಬ್ಬಳೇ ಇರುವಲ್ಲಿ ನೀವು ಉಪಯೋಗಿಸುವ ಬಹುವಚನ ಬೇಡಿ. ನಿಮ್ಮಾಕೆಯಂತೆ ಇಂದಿನಿಂದಲೇ ಕರೆಯಿರಿ '

ಮಾಧವರಾವ್ ನಸುನಕ್ಕನು. 'ಆಗಲಿ, ಇಂದೂ. ನಿನ್ನಿಷ್ಟ, ಏನು ಬರುತ್ತೋ ಹಾಗೇ ಮಾಡು. ನನ್ನ ಜೀವ, ಪ್ರೇಮಸರ್ವಸ್ವವೂ ನಿನ್ನದು. ಅನಾಥರಬ್ಬರೂ ಕೆಲವರನ್ನಾದರೂ ಸನಾಥರನ್ನಾಗಿ ಮಾಡೋಣ' ಎಂದನು.

ಇಂದಿರೆ ತನ್ನ ತೃಪ್ತಿಯನ್ನು ಕಣ್ಣುಗಳಲ್ಲಿ ತೋರಿಸಿದಳು.

'ಯಾರಿಗೂ ಹಣ ಕೊಟ್ಟರೂ ಸಿಕ್ಕದ ಒಳ್ಳೇ ಕಿತ್ತಳೆ ಹಣ್ಣು ನಿತ್ಯ ಆರರಂತೆ ನಿನಗೆಲ್ಲಿ ಸಿಕ್ಕುತ್ತಿತ್ತು, ಇಂದೂ ?' ಎಂದು ಮಾಧವರಾವ್ ಕೇಳಿದನು.

'ಮಿಸೆಸ್ ಫರ್ನಾಂಡಿಸ್ ತನ್ನ ಸಾಕು-ಮಗ ಜಾರ್ಜ ಡಿ. ಡಿ ಯವರನ್ನು ವರಿಸಲು ನನಗೆ ಕೊಡುತ್ತಿದ್ದ ಲಂಚ ಅವು.'

'ಹೋ !'

'ಹೂಂ. ಆಕೆಗೆ ಕೊಡಗಿನಿಂದ ನಿತ್ಯ ಪೋಸ್ಟಿನಲ್ಲಿ ಒಂದೊಂದು ಬುಟ್ಟಿ ಹಣ್ಣು ಬರುತ್ತಿತ್ತು. ಆತನಿಗೂ ಟೈಫಾಯಿಡ್. ಆಕೆ ಅಮೆರಿಕಾದ ಲಕ್ಷಾಧೀಶ್ವರೆ. ಮಕ್ಕಳಿಲ್ಲ. ಗಂಡ ತೀರಿ ಹೋದ. ಜಾರ್ಜ ಆಕೆಯ ಸಾಕುಮಗ; ಆಸ್ಪತ್ರೆಯ ಮಗು. ಆಕೆಯೇ ಅಮೇರಿಕಾಕ್ಕೆ ಆತ ಹೋದಾಗ ಸಾಕಿ, ತನ್ನ ಕಡೆಗಾಲವನ್ನು ಭಾರತದಲ್ಲಿ ತನ್ನ ಮತದ ಸೇವೆ ಮಾಡಿ ಕಳೆಯಬೇಕೆಂದು ಬಂದಿದ್ದಾಳೆ. ಡಾಕ್ಟರ್ ಬ್ರೈಟ್‌ಲೈಟರಿಗೆ, ಆ ನಿಗ್ರೋವನ್ನು, ತಂದೆ-ತಾಯಿ ತಿಳಿಯದವನನ್ನು, ಮದುವೆಯಾಗುವ ಬದಲು ಚಿರಬ್ರಹ್ಮಚಾರಿಣಿ ನರ್ಸ್ ಆಗಿರುತ್ತೇನೆಂದು ಹೇಳಿದೆ.'

'ಓ ! ಆ ಲಂಚ ನನಗೆ ಲಂಚ !'

'ಕಾರ್ಯಸಿದ್ಧಿಯಾಯಿತಲ್ಲಾ!' ಎಂದು ಇಂದಿರೆ ಮಾಧವರಾಯನನ್ನು ಓರೆಗಣ್ಣಿನಿಂದ ನೋಡುತ್ತಾ ಹೇಳಿದಳು.

ಮಾಧವರಾವ್ ಅವಳ ಕೈಹಿಸುಕಿ, 'ಚಕ್ರಪಾಣಿ ಬಂದರೆ ಮದುವೆಗೆ ಸರಿಯಾದ ದಿನ ನೋಡಹೇಳುತ್ತೇನೆ. ತಿರುಪತಿಯಲ್ಲಿ ಶ್ರೀನಿವಾಸ ದೇವರ ಸನ್ನಿಧಿಯಲ್ಲಿ ನಮ್ಮ ವಿವಾಹ ನೆರವೇರಲಿ' ಎಂದನು.

ಇಂದಿರೆ ಆತನನ್ನು ಮತ್ತೊಮ್ಮೆ ಮುತ್ತಿಟ್ಟು, ಓರೆಗಣ್ಣಿನಿಂದ ನೋಡುತ್ತಾ ಹೊರಟುಹೋದಳು.

—

೬

ಡಾಕ್ಟರ್ ಬ್ರೈಟ್‌ಲೈಟ್ 'ಈಜಿ-ಚೇರ'ನ ಮೇಲೆ ಕುಳಿತು, ಅಂದು ಪರ ದೇಶಗಳಿಂದ ಬರುವ ಕಾಗದಗಳ ದಿನವಾದುದರಿಂದ ಅವುಗಳಿಗಾಗಿ ಕಾದಿದ್ದಳು. ಫ್ರಾಂಕಲಿನ್ ಪೋಸ್ಟಾಫೀಸಿನಿಂದ ಟಪಾಲನ್ನು ತಂದು ಡಾಕ್ಟರ ಮುಂದಿದ್ದ ಮೇಜಿನ ಮೇಲಿಟ್ಟನು. ಆಕೆ ಅವುಗಳು ಬಂದ ಸ್ಥಳಗಳನ್ನು ನೋಡುತ್ತಾ, ಕವರಿನ ಹಿಂದುಗಡೆ 'ಮಿಸ್. ಕ್ರಿಶ್ಚಿಯಾನ ವಿಂಟರ್‌ಲ್ಯಾಂಡ್, ಬಿ. ಎ ಬಿ. ಡಿ. ಕೋಲಂಬಿಯ ವಿಶ್ವವಿದ್ಯಾನಿಲಯ' ಎಂದಿದ್ದ ತನ್ನ ಜೀವದ ಗೆಳತಿಯ ಕಾಗದವನ್ನು ಕೈಗೆ ತೆಗೆದುಕೊಂಡು, ಮಿಕ್ಕವನ್ನೆಲ್ಲಾ ಮೇಜಿನ ಮೇಲಿಟ್ಟು, 'ಬಹು ಭಾರವಿದೆ ಈ ಸಲದ ಕಾಗದ!' ಎಂದುಕೊಂಡು, ಅದನ್ನು ಒಡೆದಳು. ಅದರಲ್ಲಿ ನಾಲ್ಕು ಹಾಳೆ ಕಾಗದಗಳೂ, ಮೂವತ್ತು ರೂಪಾಯಿಗಳಿಗೆ ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾಗೆ ಬರೆದಿದ್ದ ಬ್ಯಾಂಕ್ ಡ್ರಾಫ್ಟ್ ಒಂದೂ, ಗುಂಡುಸೂಜಿಯಿಂದ ಸೇರಿಸಲ್ಪಟ್ಟಿದ್ದುವು. ಡ್ರಾಫ್ಟನ್ನು ನೋಡಿ ಡಾಕ್ಟರಿಗೆ ಆಶ್ಚರ್ಯವಾಯಿತು. ಬೇಗ ಬೇಗ ವಿಷಯ ವೇನೆಂದು ಆತುರದಿಂದ ಕಾಗದವನ್ನು ಓದತೊಡಗಿದಳು.

ಕೋಲಂಬಿಯ ವಿಶ್ವವಿದ್ಯಾನಿಲಯ
೨೨—೬—೧೯...

ಪ್ರೀತಿಪಾತ್ರಳಾದ ಮಾರ್ಗರೆಟ್,

ನಿನ್ನ ಕಾಗದ ತಲುಪಿತು. ಓದಿದೆ. ಏನು ಹೇಳಲಿ? ಒಂದು ಕಡೆ ಸಂತೋಷ ವಾಯಿತು; ಒಂದು ಕಡೆ ವ್ಯಸನವಾಯಿತು. ಚೀಣಾದಿಂದ ಸಿಸ್ಟರ್ ಮಾರಿಸ್ ಕೂಡ ನನಗೆ ಕಾಗದ ಬರೆದಿದ್ದಳು.

* * * * *

ನೀನು ಹಿಂದೆ ಕಳುಹಿಸಿದ್ದ ಇಂದಿರಾಬಾಯಿಯ ಫೋಟೋ ನೋಡಿದಾಗಲೆಲ್ಲ ಆಕೆ ವೀರ ಹಿಂದೂ ರಮಣಿ ಎನ್ನುವ ಭಾವನೆ ನನಗೆ ಬರುತ್ತಿತ್ತು. ನೀನು ವಿವರಿಸಿದಂತೆ

ಆಕೆಯ ನಡೆ-ನುಡಿಗಳನ್ನು ನೋಡಿದರೆ, ಆಕೆ ನಾನು ಹಿಂದುಗಳ ಮಹಾಕಾವ್ಯಗಳಲ್ಲಿ ಓದಿದ ಲಕ್ಷ್ಮೀದೇವಿಯ ಪ್ರೇಮ-ರೌದ್ರ-ಸೌಂದರ್ಯ-ಗಾಂಭೀರ್ಯಗಳೆಲ್ಲಾ ಮೂರ್ತೀಭವಿಸಿದಂತೆ ಕಂಡುಬರುತ್ತಿದೆ. ವೇದಘೋಷದ ನಡುವೆ ಜನಿಸಿದ ಆಕೆ ಹೇಗೆ ಅದರ ಸಂಪರ್ಕದಿಂದ ಬೇರೆಯಾದಾಳು! ಕೂಳಿಗೋಸ್ಕರ ನಮ್ಮ ಮನೆಗಳಲ್ಲಿ ಕೆಲಕಾಲ ಕೋಗಿಲೆಯಂತೆ ಇದ್ದಳು. ತನ್ನನ್ನು ಉದ್ಧರಿಸುವ ದಾತ ದೊರೆತೊಡನೆಯೇ ವಿಶಾಲ ಸಂಸಾರ ಸಾಗರದಲ್ಲಿ ವಿಹರಿಸಲು ಹೋದಳು. ಅದಕ್ಕೇಕೆ ಅಷ್ಟು ಚಿಂತೆಪಡುತ್ತಿದ್ದೀ ?

ಸಿಸ್ಟರ್ ಫಿಲೋಮಿನಾ ಏನೋ ಮೂಢಳಾಗಿ ಆತನ ಮಾತನ್ನು ಒಪ್ಪಿ ಸಂತೋಷಿಸಿದ್ದು ಸರಿಯೇ. ಓದಿದ, ಪ್ರಪಂಚವನ್ನು ಚೆನ್ನಾಗಿ ನೋಡಿರುವ ನೀನೂ ಸಿಸ್ಟರಳ ಮಾತಿಗೆ ತಲೆದೂಗಿದೆಯಲ್ಲಾ! ನಾವು ಹಿಂದುಗಳ ಗ್ರಂಥಗಳನ್ನು ಓದುವಂತೆಯೇ ಎಷ್ಟು ಜನ ಹಿಂದುಗಳು ನಮ್ಮ ಗ್ರಂಥಗಳನ್ನು ಓದುವುದಿಲ್ಲ? ಆತ ಇಂಗ್ಲಿಷ್ ಸಾಹಿತ್ಯದ ಎಂ. ಎ. ಬೈಬಲಿಲ್ಲದ ಇಂಗ್ಲಿಷ್ ಸಾಹಿತ್ಯವಿದೆಯೇ ? ಬರಿಯ ಡಾಕ್ಟರಾದ ನಿನಗೆ ಅದು ವೇದ್ಯವಾಗಿಲ್ಲವೇನೋ! ಅವರು ತಮ್ಮ ವಿವಾಹವನ್ನು ಅವರ ದೇವನ ವಾಸಸ್ಥಳವಾದ ತಿರುಪತಿಯಲ್ಲಿ ಮಾಡಿಕೊಂಡುದರಿಂದಲೇ ಅವರ ರಕ್ತಗತವಾದ ಹಿಂದೂಧರ್ಮದ ಮೇಲಿನ ಪ್ರೇಮ ವ್ಯಕ್ತವಾಗುವುದಿಲ್ಲವೇ ?

ನೀನು ಈ ಇಬ್ಬರು ಪ್ರೇಮಿಗಳನ್ನಾದರೂ ಕ್ಷಮಿಸಬಹುದೆಂದೆ. ಕ್ಷಮಿಸಲೇಬೇಕು. ಆಗ ನಿನ್ನ ಮನಸ್ಸು ಹಗುರವಾಗುತ್ತದೆ. ಯಾರೂ ಅಷ್ಟೆ, ತಮ್ಮ ಮತದಿಂದ ಬೇರೆ ಮತಕ್ಕೆ ಬರಬೇಕಾದರೆ ಕೂಳು, ಬಲಾತ್ಕಾರ ಇಲ್ಲವೇ ವಿವಾಹ! ಮತವನ್ನೊಲಿದು ಬರುವವರು ಅಪರೂಪ. ನೂತನ ದಂಪತಿಗಳಿಬ್ಬರೂ ಬಡತನದಲ್ಲಿಯೂ ಮತವನ್ನು ಬಿಡದೆ ಬೆಳೆದರು. ದೊಡ್ಡವರಾಗಿ ಸಂಪಾದಿಸುವ ಕಾಲದಲ್ಲಿ ಪರಮತಾವಲಂಬಿಗಳಾಗುತ್ತಾರೆಯೇ? ನಾನು ಈಗ ನನ್ನ ವೇದಾಂತದ ಎಂ. ಎ. ಗೋಸ್ಕರ ಎಲ್ಲಾ ಮತ ಗ್ರಂಥಗಳನ್ನೂ ಓದುತ್ತಿದ್ದೇನೆ. ಹಿಂದೂಧರ್ಮವನ್ನು ತಿಳಿದುಕೊಳ್ಳಲು ಶ್ರೀವಿವೇಕಾನಂದರು ಇಲ್ಲಿ ನಮ್ಮ ಜನಕ್ಕೆ ಕೊಟ್ಟ ಭಾಷಣಗಳನ್ನೆಲ್ಲಾ ಓದಿದ್ದೇನೆ. ಆಗಾಗ ಇಲ್ಲಿನ ಶ್ರೀ ರಾಮಕೃಷ್ಣಾಶ್ರಮಗಳಿಗೆ ಹೋಗಿ ಸ್ವಾಮಿಗಳಿಂದ ಪಾಠಕಲಿಯುತ್ತಿದ್ದೇನೆ. ಮಾರ್ಗರೆಟ್, ಕೋಪಿಸಬೇಡ; ಶ್ರೀ. ವಿವೇಕಾನಂದರು ಹೇಳಿರುವಂತೆ ಹಿಂದೂಮತ ಸಾಗರ; ನಮ್ಮದು ಒಂದು ಕೊಳ. ಸಾಗರದಲ್ಲಿ ವಿಹರಿಸುವ ಜನವನ್ನು ಕೂಳಿನಾಸೆ ತೋರಿಸಿ ಏಕೆ ನಾವು ಕೊಳಕ್ಕೆ ಎಳೆಯುತ್ತಿದ್ದೇವೆ! ಈಗಲೂ ಅಷ್ಟೆ, ಅವರೇ ಅಮೇರಿಕಾದಲ್ಲಿ ಹೇಳಿದಂತೆ 'ಭಾರತಕ್ಕೆ ಬೇಕಾದುದು ಅನ್ನ, ಮತಬೋಧನೆಯಲ್ಲ' ಪ್ರತಿಫಲಾಪೇಕ್ಷೆಯಿಲ್ಲದೆ ಅನ್ನದಾನವಿತ್ತರೆ ದೇವ ಮೆಚ್ಚುವನು.

ಆ ಇಬ್ಬರು ಮಕ್ಕಳನ್ನೂ ಆಕೆ ಕ್ರೈಸ್ತಮತದಿಂದ ಹೊರಗಾಗುವಂತೆ ಮಾಡಿದಳಲ್ಲಾ ಎನ್ನುವುದೇ, ನಿನ್ನ ಮನಸ್ಸು ಕ್ಷಮಿಸದಂತಹ, ನಿನ್ನ ವಿಪರೀತವಾದ ಕೋಪವೆಂದು

ಕಾಣುತ್ತದೆ. ಆಕೆಯ ವಿವಾಹಕ್ಕಿಂತ ಆಕೆಯ ಈ ಕಾರ್ಯವನ್ನು ನಾನು ಬಹಳ ಮೆಚ್ಚು ತ್ತೇನೆ. ಅಸ್ಪತ್ರೆಯ ಮಕ್ಕಳ ಗುಂಪಿನಲ್ಲಿ ಬೆಳೆದಿದ್ದರೆ ಆ ಮಕ್ಕಳ ಪಾಡು ಮುಂದೆ ಏನು? ನಾವುಗಳು ಅವರನ್ನು ಕಪ್ಪುಜನವೆಂದು ಹತ್ತಿರ ಸೇರಿಸುವುದಿಲ್ಲ; ತಮ್ಮವರಲ್ಲವೆಂದು ಹಿಂದುಗಳೂ ಹತ್ತಿರ ಸೇರಿಸುವುದಿಲ್ಲ ಅವರ ಪಾಡು ಮುಂದೆ ಆ ಡಾಕ್ಟರ್ ಜಾರ್ಜರ ಪಾಡಿನಂತೆಯೇ! ಎಷ್ಟು ಹಣವಿದ್ದರೇನು ಸಮಾಜದಲ್ಲಿ ಸ್ಥಾನ ಮಾನಗಳಿಲ್ಲದ ಮೇಲೆ, ತಂದೆ ತಾಯಿಗಳು ಗೊತ್ತಿಲ್ಲದ ಮೇಲೆ! ಈಗ ನೋಡು! ಆ ಮಕ್ಕಳನ್ನು ಅವರ ತಂದೆತಾಯಿಗಳು ಬಂದು ನೋಡಿಕೊಂಡು ಹೋಗಬಹುದು. ಮುಂದಿನ ಅವರ ಜೀವ ನದ ಮಧ್ಯಾಹ್ನದಲ್ಲಿ ಅವರೊಡನೆ ನಲಿಯಬಹುದು. ಯಾರು ಬಲ್ಲರು; ಆ ಮಕ್ಕಳು ಏಕೆ ಮುಂದೆ ವೈಸರಾಯರ ಕೌನ್ಸಿಲಿನ ಮೆಂಬರುಗಳಾಗಬಾರದು! ಅಷ್ಟೇ ಅಲ್ಲ, ಮುಂದಿನ ಸ್ವತಂತ್ರ ಭಾರತದ—ನಮ್ಮ ಪ್ರೆಸಿಡೆಂಟ್ ರೂಸ್ವೆಲ್ಟರಂತೆ—ಅಧ್ಯಕ್ಷ ಅವರಲ್ಲಿ ಯಾರಾ ದರೊಬ್ಬನಾಗಬಾರದು! ಆಗ ಆಗಬಹುದಾದ ಆ ಬಡ ತಂದೆತಾಯಿಗಳ ಭಾವೀ ಸಂತೋ ಷಕ್ಕೆ ಕಾರಣಗಳಾಗುವಂತಿರುವ ಆಕೆಯನ್ನು ಏಕೆ ನಾವು ಈಗಲೇ ಹೊಗಳಬಾರದು?

ಮಾರ್ಗರೆಟ್! ನಾನೂ ಭಾರತಕ್ಕೆ ಬೋಧಕಳಾಗಿ ಬರಬೇಕೆಂದೇ ಓದುತ್ತಿದ್ದೇನೆ ದೀನಬಂಧು ಆ್ಯಂಡ್ರೂಸರ 'ನಾನು ಭಾರತಕ್ಕೆ ಬೋಧಕನಾಗಿ ಬಂದೆ, ಇಲ್ಲಿ ಗುರುಗಳನ್ನು ಕಂಡೆ' ಎನ್ನುವ ಮಾತುಗಳು ಹಿಂದೂ ಗ್ರಂಥಗಳಿಂದ ನನ್ನ ಕಿವಿಗೆ ಪ್ರತಿಧ್ವನಿ ಕೊಡು ತ್ತಿವೆ. 'ಎಲ್ಲಾ-ದೇವರುಗಳ ನಮಸ್ಕಾರವೂ ಒಬ್ಬ ದೇವನಿಗೇ ಸೇರುತ್ತದೆ' ಎನ್ನುವ ಹಿಂದೂಮತದ ವೈಶಾಲ್ಯವನ್ನು ನೋಡು!

ಮಾರ್ಗರೆಟ್! ನಾನು ಇಂದಿರಾಬಾಯಿಯನ್ನು ಬಹಳ ಮೆಚ್ಚಿದ್ದೇನೆ. ಎಂದಾ ದರೂ ಭಾರತಕ್ಕೆ ಬಂದರೆ ಮರೆಯದೆ ಆ ಆದರ್ಶ ಹಿಂದೂ ರಮಣಿಯನ್ನು ನೋಡಬಯ ಸುತ್ತೇನೆ. ಗೆಳತಿ! ನನ್ನದೊಂದು ಪ್ರಾರ್ಥನೆ. ಅದನ್ನು ಸಲ್ಲಿಸಿಕೊಡು. ಈ ಕಾಗದ ದೊಡನೆ ಇಟ್ಟಿರುವ ಹತ್ತು ಡಾಲರುಗಳಿಗೆ—ಏನೋ ಮೂವತ್ತು ರೂಪಾಯಿಯಂತೆ. ಅದು ಇನ್ನೂ ನನಗೆ ಅರ್ಥವಾಗದು—ಏನಾದರೂ ಒಂದು ಸರಿಯಾದ ವಸ್ತುವನ್ನು ತೆಗೆದು ಆಕೆಗೆ ನನ್ನ ಉಡುಗೊರೆಯಾಗಿ ಕೊಡು. ಇದರೊಡನೆ ನೀನೂ, ಸಿಸ್ಟರ್ ಮಾರಿಸಳಂತೆ ನಿನ್ನ ವಿಶಾಲಹೃದಯವನ್ನು ತೋರಿಸುವ ಉಡುಗೊರೆಯನ್ನಿತ್ತರೆ ನಿನ್ನ ಕ್ರಿಶ್ಚಿಯಾನ ಬಹಳ ಸಂತೋಷಪಡುವಳು.

ನಿನ್ನ ಮನ ನೋಯುವಂತೆ ಏನಾದರೂ ಬರೆದಿದ್ದರೆ ನಿನ್ನ ಬಾಲ್ಯದ ಮತ್ತು ಜೀವದ ಗೆಳತಿಯನ್ನು ಕ್ಷಮಿಸು.

ನಿನಗೆ ನನ್ನ ಅನಂತ ಮುತ್ತುಗಳು.

ನಿನ್ನ
ಕ್ರಿಶ್ಚಿಯಾನ.

'ಕ್ರಿಶ್ಚಿಯಾನ' ಎಂದು ಓದಿ ಮುಗಿಸಿದೊಡನೆಯೇ ಕಾಗದ ಜಾರಿ ಆಕೆಯ ಕೈಯಿಂದ ಕೆಳಗೆ ಬಿದ್ದಿತು. ಆಕೆಯ ಕಣ್ಣುಗಳು ಫಳಫಳನೆ ನೀರಿನಿಂದ ತುಂಬಿ ಹೊಳೆದವು. ತನ್ನ ಮೊಬ್ಬಿನ ಕಣ್ಣುಗಳಿಂದ, ತಲೆಯನ್ನು ಮೇಲಕ್ಕೆತ್ತಿ ನೇತುಹಾಕಿದ್ದ ಪಟಗಳಲ್ಲಿ ವಿರಾಜಿಸುತ್ತಿದ್ದ ಕ್ರಿಸ್ತದೇವನ ಮೇಲೆ ದೈನ್ಯಕಟಾಕ್ಷವನ್ನು ಬೀರಿದಳು.

—

## ಮನೋಹರ ಗ್ರಂಥಮಾಲೆ[illegible] ಕಾದಂಬರಿಗಳು

| | | | |
|---|---|---|---|
| ೧ | ಸುದರ್ಶನ | ಆನಂದಕಂದ | ೦-೧೪-೦ |
| ೨ | ನವಿಲುಗರಿ* | ಬೇರೆಬೇರೆಯವರು | ೦-೧೨-೦ |
| ೩ | ತ್ರಿಪುರದಹನ* | ಮ. ಆ. ದೊರೆಸ್ವಾಮಿ ಐಯ್ಯಂಗಾರ್ | ೦-೧೨-೦ |
| ೪ | ಬಾಳುರಿ* | ರಂ. ಶ್ರೀ. ಮುಗಳಿ | ೦-೧೨-೦ |
| ೫ | ಬ್ರಾಹ್ಮಣರ ಹುಡುಗಿ* | ಆರ್. ವ್ಯಾಸರಾವ | ೦-೧೨-೦ |
| ೬-೭ | ವಿಶ್ವಾಮಿತ್ರನ ಸೃಷ್ಟಿ* | ಶ್ರೀರಂಗ | ೧-೧೨-೦ |
| ೮ | ಜೀವನ* | ಕೃಷ್ಣಕುಮಾರ | ೦-೧೨-೦ |
| ೯ | ಕಾಳರಾತ್ರಿ* | ಮಧುರಚೆನ್ನ | ೦-೧೨-೦ |
| ೧೦ | ಧರ್ಮಶೆರೆ* | ಜಡಭರತ | ೦-೧೪-೦ |
| ೧೧ | ರಾಜಯೋಗಿ | ಆನಂದಕಂದ | ೧- ೦-೦ |
| ೧೨ | ಕೋಲ್ಮಿಂಚು | ಬೇರೆಬೇರೆಯವರು | ೧-[illegible] |
| ೧೩-೧೪ | ಇಜ್ಜೋಡು* | ವಿ. ಕೃ. ಗೋಕಾಕ | ೧- ೮-೦ |
| ೧೫ | ಕುರಿಹಿಂಡು* | ಜಲಧರ | ೧- ೦-೦ |
| ೧೬ | ಧೂಮಕೇತು | ಕಡೆಂಗೋಡ್ಲು ಶಂಕರಭಟ್ಟ | ೦-೧೪-೦ |
| ೧೭ | ಧರ್ಮಜ್ಯೋತಿ | ಮ. ಆ. ದೊರೆಸ್ವಾಮಿ ಐಯ್ಯಂಗಾರ್ | ೧- ೪-೦ |
| ೧೮ | ಸೇವಾಪ್ರದೀಪ | ರಂ. ಶ್ರೀ. ಮುಗಳಿ | ೦-೧೨-೦ |
| ೧೯ | ದಿಲ್ಲೀಶ್ವರನ ದಿನಚರಿ* | ನಾ. ಕಸ್ತೂರಿ | ೦-೧೨-೦ |
| ೨೦ | ಪುಷ್ಪಮಾಲೆ | ಶ್ರೀಸ್ವಾಮಿ | (೨ನೇ ಆವೃತ್ತಿ ಅಚ್ಚಿನಲ್ಲಿ) |
| ೨೧ | ಸೋಲೋ ಗೆಲವೋ | ದೇವುಡು | ೦-೧೨-೦ |
| ೨೨ | ಹಳ್ಳಿಯ ಸಮಾಜ* | ಆರ್. ವ್ಯಾಸರಾವ್ | ೦-೧೪-೦ |
| ೨೩ | ಪಾವನಪಾವಕ | ರಂ. ಶ್ರೀ. ಮುಗಳಿ | ೦- ೮-೦ |
| ೨೪ | ಸಮುದ್ರದಾಚೆಯಿಂದ | ವಿ. ಕೃ ಗೋಕಾಕ | ೧- ೦-೦ |
| ೨೫ | ಸರಸಮ್ಮನ ಸಮಾಧಿ | ಶಿವರಾಮ ಕಾರಂತ | ೦-೧೨-೦ |
| ೨೬-೨೭ | ಎರಡು ಧ್ರುವ | ವ್ಹಿ. ಎಂ. ಇನಾಮದಾರ | ೨- ೦-೦ |
| ೨೮ | ಸಮುದ್ರದಾಚೆಯಿಂದ | ವಿ. ಕೃ. ಗೋಕಾಕ | ೧- ೦-೦ |
| ೨೯ | ಹೂಬಾಣಗಳು* | ಪ. ರಮಾನಂದ | ೧- ೮-೦ |
| ೩೦ | ಮಹಾಪೂರ | ಎಸ್. ಜಿ. ಕುಲಕರ್ಣಿ | ೦-೧೨-೦ |
| ೩೧ | ಸಂಧ್ಯಾರಾಗ | ಅ. ನ. ಕೃಷ್ಣರಾಯ | ೧- ೦-೦ |
| ೩೨-೩೩ | ಪ್ರೇಮಾಹುತಿ | ಗುರುರಾಜ ಜೋಶಿ | ೧- ೮-೦ |